ಮೈಸೂರು ವಿಶ್ವವಿದ್ಯಾನಿಲಯ

ಪ್ರಚಾರ ಪುಸ್ತಕಮಾಲೆ—೯೪

# ದಾರಿತಪ್ಪಿದ ಮಕ್ಕಳು

ಎನ್. ಎಸ್. ಶಾಂತಮ್ಮ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೮

ಮೈಸೂರು ವಿಶ್ವವಿದ್ಯಾನಿಲಯ
ಪ್ರಚಾರ ಪುಸ್ತಕಮಾಲೆ—೯೪

# ದಾರಿತಪ್ಪಿದ ಮಕ್ಕಳು

ಎನ್. ಎಸ್. ಶಾಂತಮ್ಮ, ಎಂ.ಎ.




ಪ್ರಸಾರಾಂಗ
ಮೈಸೂರು ವಿಶ್ವವಿದ್ಯಾನಿಲಯ
೧೯೬೮

ಮೊದಲನೆಯ ಮುದ್ರಣ ೧೯೫೯
ಎರಡನೆಯ ಮುದ್ರಣ ೧೯೬೮
೩೦೦೦ ಪ್ರತಿಗಳು

ಬೆಲೆ

ಸಾದಾ ಪ್ರತಿ ೨೫ ಪೈಸೆ
ಉತ್ತಮ ಪ್ರತಿ ೩೭ ಪೈಸೆ

ಮುದ್ರಕರು :
ಶ್ರೀ ಮೀರಾ ಪ್ರಿಂಟರ್ಸ್
ಶಿವರಾಂಪೇಟೆ, ಮೈಸೂರು.

# ಮುನ್ನುಡಿ

ಈ ಪ್ರಚಾರ ಪುಸ್ತಕಮಾಲೆ ಪ್ರಾರಂಭವಾಗಿ ಇಂದಿಗೆ ಸುಮಾರು ಇಪ್ಪತ್ತೈದು ವರ್ಷಗಳಾಗಿವೆ. ಈ ಅವಧಿಯಲ್ಲಿ ೯೩ ಪುಸ್ತಿಕೆಗಳು ಈ ಮಾಲೆಯಲ್ಲಿ ಪ್ರಕಟವಾಗಿವೆ. ಕಾಲಾವಧಿಯನ್ನು ಗಮನಿಸಿದರೆ ಈಗ ಹೊರಬಿದ್ದಿರುವ ಕಿರುಹೊತ್ತಗೆಗಳ ಸಂಖ್ಯೆ ಈಗಿರುವುದಕ್ಕಿಂತಲೂ ದ್ವಿಗುಣವೊ ತ್ರಿಗುಣವೂ ಆಗಿರಬೇಕಾಗಿತ್ತೆಂದು ಹೇಳಬಹುದು. ಆದರೂ ಅವುಗಳ ಗುಣವನ್ನೂ ಅವು ಮಾರಾಟವಾಗುತ್ತಿರುವ ವೇಗವನ್ನೂ ಗಮನಿಸಿದರೆ ಈ ಮಾಲೆಯ ಉಪಯುಕ್ತತೆ ಮತ್ತು ಜನಪ್ರಿಯತೆ ವ್ಯಕ್ತವಾಗುತ್ತದೆ. ಸಾಮಾನ್ಯವಾಗಿ ಪ್ರತಿಯೊಂದು ಪುಸ್ತಿಕೆಯೂ ಮೂರು ನಾಲ್ಕು ಸಾರೆ ಮುದ್ರಿತವಾಗಿದೆ. ದಿನೇ ದಿನೇ ಈ ಮಾಲೆಯ ಬಗೆಗೆ ಜನರ ವಿಶ್ವಾಸಾದರಗಳು ಅಧಿಕವಾಗುತ್ತಿವೆ. "ಈ ತಿಂಗಳು ಏನಾದರೂ ಹೊಸ ಪುಸ್ತಿಕೆ ಬಂದಿದೆಯೆ ? ಮುಗಿದು ಹೋಗಿರುವ ಪುಸ್ತಿಕೆಗಳು ಅಚ್ಚಾಗಿವೆಯೆ? " ಎಂದು ಮೇಲಿಂದ ಮೇಲೆ ಜನ ಕೇಳುತ್ತಿರುತ್ತಾರೆ. ಇದು ನಿಜವಾಗಿಯೂ ಸಂತೋಷದ ಸಂಗತಿ; ನಾಡಿನ ಪ್ರಗತಿಯ ಒಂದು ಚಿಹ್ನೆ.

ನಾಡಿನಲ್ಲಿ ದಿನೇ ದಿನೇ ವಿದ್ಯಾವಂತರ ಮತ್ತು ಅಕ್ಷರಸ್ಥರ ಸಂಖ್ಯೆ ಬೆಳೆಯುತ್ತಿದೆ. ಕೇವಲ ಸಾಕ್ಷರತೆಯಿಂದ ಮಹತ್ತಾದ ಪ್ರಯೋಜನವೇನೂ ಲಭಿಸದು. ಸಾಕ್ಷರತೆ ಬೇರೊಂದು ಸಿದ್ಧಿಗಾಗಿ ಸಾಧನವೇ ಹೊರತು ಅದೇ ಪರಮ ಗುರಿಯಲ್ಲ; ಜ್ಞಾನ ಸಂಪಾದನೆಯೇ ಅದರ ಪರಮಗುರಿ. ಈ ಗುರಿಯ ಸಾಧನೆಗಾಗಿ ಸಕಲ ಅನುಕೂಲತೆಗಳನ್ನು ಕಲ್ಪಿಸುವುದು ವಿಶ್ವವಿದ್ಯಾನಿಲಯದಂಥ ಸಂಸ್ಥೆಗಳ ಆದ್ಯಕರ್ತವ್ಯ. ಈ ಮೂಲಕ ವಿಶ್ವ

ವಿದ್ಯಾನಿಲಯದ ಜ್ಞಾನವಾಹಿನಿ ನಾಡಿನ ಮೂಲೆಮೂಲೆಗೆಲ್ಲ ಹರಿದು, ಸಮಷ್ಟಿಪ್ರಜ್ಞೆ ವಿಕಾಸಗೊಳ್ಳಲನುಕೂಲವಾಗುತ್ತದೆ.

ಈ ಮಾಲೆಯಿಂದ ಸಾಮಾನ್ಯ ಜನರಲ್ಲಿ ಜ್ಞಾನಪ್ರಸಾರ ಕಾರ್ಯ ತಕ್ಕಮಟ್ಟಿಗೆ ಯಶಸ್ವಿಯಾಗಿ ನಡೆದಿರುವಂತೆಯೆ ಕನ್ನಡದಲ್ಲಿ ವಿಜ್ಞಾನ ಸಂಬಂಧವಾದ ವಿಷಯಗಳನ್ನು ಸುಲಭವಾಗಿ ಸರಳವಾಗಿ ಹೇಳಬಹುದು, ಮತ್ತು ಕನ್ನಡ ವೈಜ್ಞಾನಿಕ ಭಾಷೆಯಾಗಬಲ್ಲದು ಎಂಬ ಅಂಶ ಸ್ಪಷ್ಟವಾಗಿ ವ್ಯಕ್ತವಾಗುತ್ತದೆ. ಈ ಪುಸ್ತಿಕೆಗಳ ಪಟ್ಟಿಯನ್ನೊಮ್ಮೆ ಓದಿದರೆ ಸಂದೇಹವಾದಿಗಳ ಶಂಕೆ ಸಂಪೂರ್ಣವಾಗಿ ನಿವಾರಣೆಗೊಂಡು ಧೈರ್ಯಮೂಡದಿರದು. ಇವುಗಳಲ್ಲಿ ೬೪ ಪುಸ್ತಿಕೆಗಳು ಭೌತವಿಜ್ಞಾನ. ರಸಾಯನ ವಿಜ್ಞಾನ, ಪ್ರಾಣಿ ವಿಜ್ಞಾನ, ಸಮಾಜ ವಿಜ್ಞಾನ, ವೈದ್ಯ ವಿಜ್ಞಾನ, ಗಣಿತ ವಿಜ್ಞಾನ, ಇತಿಹಾಸ ಮೊದಲಾದುವುಗಳಿಗೆ ಸಂಬಂಧಿಸಿದವು. ಉಳಿದ ೨೮ ಪುಸ್ತಿಕೆಗಳು ಸಾಹಿತ್ಯ ಮತ್ತು ಸಾಹಿತ್ಯ ವಿಮರ್ಶೆಗೆ ಸಂಬಂಧಿಸಿದುವು. ಇವುಗಳ ಗ್ರಂಥಕರ್ತರು ಪ್ರಮುಖವಾಗಿ ವಿಶ್ವವಿದ್ಯಾನಿಲಯದಲ್ಲಿ ಹತ್ತಿಪ್ಪತ್ತು ವರ್ಷಗಳ ಕಾಲ ಪಾಠ ಹೇಳಿ ನುರಿತಿರುವ ಘನ ವಿದ್ವಾಂಸರು ಬಹಳ ಹಿಂದೆಯೇ ವೈಜ್ಞಾನಿಕ ಗ್ರಂಥಗಳ ರಚನೆಗೆ ಕೈಹಾಕಿ ಕನ್ನಡ ವೈಜ್ಞಾನಿಕ ಭಾಷೆಯಾಗುವ ಸಾಮರ್ಥ್ಯವನ್ನು ಪಡೆದಿದೆ, ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣಮಾಧ್ಯಮವಾಗುವ ಶಕ್ತಿಯನ್ನು ಪಡೆದಿದೆ ಎಂದು ತೋರಿಸಿಕೊಟ್ಟಿದ್ದಾರೆ. ಅವರೆಲ್ಲ ಅಭಿನಂದನಾರ್ಹರು.

ಈ ಮಾಲೆಯ ಕಾರ್ಯ ತ್ವರಿತಗೊಂಡು, ವಿಸ್ತಾರಗೊಂಡು ಪುಸ್ತಕಗಳ ಸಂಖ್ಯೆ ದಿನೇ ದಿನೇ ಬೆಳೆಯಬೇಕೆಂದೂ, ಇದರಿಂದ ಸಾಮಾನ್ಯ ಜನತೆ ಸಂಪೂರ್ಣ ಪ್ರಯೋಜನ ಪಡೆದು ಸಮಷ್ಟಿ

ಪ್ರಜ್ಞೆ ಸರ್ವತೋಮುಖವಾಗಿ ವಿಕಾಸಗೊಳ್ಳಬೇಕೆಂಬುದು ವಿಶ್ವವಿದ್ಯಾನಿಲಯದ ಆಸೆ. ಕನ್ನಡನಾಡು ಒಂದುಗೂಡಿರುವ ಈ ಶಕ ಮುಹೂರ್ತದಲ್ಲಿ ಕನ್ನಡನುಡಿ ಆಡಳಿತದ ಭಾಷೆಯಾಗಿ ವ್ಯವಹಾರದ ಭಾಷೆಯಾಗಿ, ಶಿಕ್ಷಣದ ಭಾಷೆಯಾಗಿ, ಜನತೆಯ ಸಂಸ್ಕೃತಿವಿಕಾಸ ಸಾಧನದ ಭಾಷೆಯಾಗಿ ಮುಂದುವರಿಯೂ ವುದರಲ್ಲಿ ಸಂದೇಹವಿಲ್ಲ. ವಿಶ್ವವಿದ್ಯಾನಿಲಯದ ಈ ಸೇವೆ ಯನ್ನು ಕರ್ನಾಟಕ ಸಂಪೂರ್ಣವಾಗಿ ತನ್ನ ಮೇಲ್ಮೆಗೂ ಏಳ್ಗೆಗೂ ಬಳಸಿಕೊಳ್ಳುತ್ತದೆಂದು ನಾವು ಹಾರೈಸುತ್ತೇವೆ.

ಮೈಸೂರು
೨೧—೧೨—೧೯೫೯

ಕೆ. ವಿ. ಪುಟ್ಟಪ್ಪ
ವೈಸ್-ಛಾನ್ಸಲರ್

# ಅರಿಕೆ

ಇಂಗ್ಲೀಷ್ ಭಾಷೆಯಲ್ಲಿರುವ ಮನಶ್ಶಾಸ್ತ್ರದ ಪುಸ್ತಕಗಳನ್ನು ಮತ್ತು ಕೆಲವು ರಿಪೋರ್ಟ್‌ಗಳನ್ನು ಓದಿ ಅವುಗಳಿಂದ ವಿಷಯ ಸಂಗ್ರಹಿಸಿ ಈ ಪುಸ್ತಕವನ್ನು ಬರೆದಿದ್ದೇನೆ. ಪುಸ್ತಕಗಳಿಂದ ಆರಿಸಿದ ವಿಷಯಗಳ ಜೊತೆಗೆ ನಮ್ಮ ಸುತ್ತಮುತ್ತ ಗೋಚರವಾಗುವ ನಿದರ್ಶನಗಳನ್ನು ಇಲ್ಲಿ ಅಳವಡಿಸಿಕೊಂಡು ಬರೆದಿದ್ದೇನೆ

ದಾರಿತಪ್ಪಿದ ಮಕ್ಕಳು—ಇಲ್ಲಿ ಬರೆದಿರುವ ಸಂಗತಿಗಳು ಬಹುವಾಗಿ ಪಟ್ಟಣವಾಸಿಗಳಿಗೆ ಅನ್ವಯಿಸಿರುವುದು. ಆದರೆ ಪಟ್ಟಣದ ಸಂಪರ್ಕವೇ ಇಲ್ಲದ ನಮ್ಮ ಹಳ್ಳಿಗಳಲ್ಲಿ ಮಕ್ಕಳ ಸಮಸ್ಯೆಗಳು ಮತ್ತು ಸಮಸ್ಯೆಗಳ ಕಾರಣಗಳು ಬಹುಶಃ ಬೇರೆಯಾಗಿರಬಹುದೇ ಅಥವ ಇಲ್ಲವೇ ಎಂಬ ಪ್ರಶ್ನೆ ಇದುವರೆವಿಗೂ ಪರಿಶೀಲಿಸಿಲ್ಲ.

ಬೆಂಗಳೂರು

೨೦—೧೨—೧೯೫೯ ಎನ್. ಎಸ್. ಶಾಂತಮ್ಮ

# ದಾರಿತಪ್ಪಿದ ಮಕ್ಕಳು

ಮಕ್ಕಳು ಸತ್ಯಸಂಧರು, ಸಾತ್ವಿಕರು, ಧರ್ಮಿಷ್ಠರು ಮತ್ತು ಪರೋಪಕಾರಿಗಳಾಗಿ ಬಾಳಬೇಕೆಂಬುದೇ ಹೆತ್ತವರ ಬಯಕೆ. ಆದರೆ ಅನೇಕ ಮಕ್ಕಳು ಈ ಹೆದ್ದಾರಿಯನ್ನು ಅನುಸರಿಸದೆ ದಾರಿತಪ್ಪುತ್ತಾರೆ. "ದಾರಿತಪ್ಪಿದ" ಮಕ್ಕಳು ಅಪರಾಧಿಗಳೆಂದು ಅರ್ಥವಲ್ಲ ಅವರ ಕೆಲಸಕಾರ್ಯಗಳು ಸಾಮಾಜಿಕ ಜೀವನಕ್ಕೆ ಧಕ್ಕೆ ತಗಲುವಂತಿರುವುವು. ಅವರು ತಮ್ಮ ಆಸೆ ಅಭಿಲಾಷೆಗಳನ್ನು ಸಮಾಜವು ಅನುಮತಿಸದ ರೀತಿಯಲ್ಲಿ ತೀರಿಸಿಕೊಳ್ಳುತ್ತಾರೆ. ಇದು, ನಮಗೆ ಕಾಣುವ "ದಾರಿತಪ್ಪಿದ" ಮಕ್ಕಳ ಹೊರ ಚಿತ್ರ. ಇನ್ನೂ ಆಳವಾಗಿ ಪರಿಶೀಲಿಸಿದರೆ ಮಕ್ಕಳು ತಮ್ಮ ಸುತ್ತ ಮುತ್ತಲಿನ ವಾತಾವರಣದಿಂದಾಗಿ ತಪ್ಪುದಾರಿ ಹಿಡಿಯಬಹುದು. ಮತ್ತು ತಮ್ಮ ಸುಪ್ತ ಚೇತನದಲ್ಲಿ ಅಡಗಿಸಿಟ್ಟಿರುವ ಕ್ರೋಧ, ದ್ವೇಷಾಸೂಯೆ, ಮತ್ತು ಅಸಮಾಧಾನಗಳನ್ನು "ತಪ್ಪುದಾರಿ" ಹಿಡಿದು ವ್ಯಕ್ತಪಡಿಸಬಹುದು.

ದಾರಿತಪ್ಪಿದ ಮಕ್ಕಳ ರೀತಿನೀತಿಗಳು ಅನೇಕ ವಿಧವಾದುವು. ಅವರು ಅತಿಯಾಗಿ ಸುಳ್ಳುಹೇಳಬಹುದು; ಕಳ್ಳತನಕ್ಕೆ ತೊಡಗಬಹುದು; ಶಾಲೆಗೆ ತಪ್ಪಿಸಿಕೊಳ್ಳಬಹುದು; ಮನೆಯಿಂದ ಆಗಿಂದಾಗ್ಗೆ ಓಡಿಹೋಗಬಹುದು; ದುಷ್ಟತನ ಮತ್ತು ಹಿಂಸಾತ್ಮಕ ಕೃತ್ಯಗಳಲ್ಲಿ ತೊಡಗಬಹುದು; ಅತ್ಯಂತ ಅವಿಧೇಯರಾಗಬಹುದು; ಕೆಲವು ಸನ್ನಿವೇಶಗಳಲ್ಲಿ ಮನೆಗಳಿಗೆ ಬೆಂಕಿಹಚ್ಚುವ ಕೆಲಸದಲ್ಲಿ ಸಹ ತೊಡಗಬಹುದು.

ಸುಳ್ಳು ಹುಟ್ಟುಗುಣಗಳಲ್ಲಿ ಒಂದಲ್ಲ. ಯಾವ ಮಗುವೇ ಆಗಲಿ ಪ್ರಥಮದಲ್ಲಿ ಸ್ವಾಭಾವಿಕವಾಗಿ ಸುಳ್ಳು ಹೇಳು

ವುದಿಲ್ಲ. ಚಿಕ್ಕ ಮಕ್ಕಳ ಮಾತುಕಥೆಗಳಲ್ಲಿ ಸತ್ಯಾಂಶವಿಲ್ಲದಿದ್ದರೂ ಸುಳ್ಳು ಎನ್ನಲಾಗುವುದಿಲ್ಲ ಉದಾಹರಣೆಗೆ, ಮಗುವು "ಅಪ್ಪ ಬರುತ್ತಿದ್ದಾರೆ" ಎಂದು ಕೂಗಿ ಹೇಳಿದಾಗ ಹಿರಿಯರು ಬಾಗಿಲಿಗೆ ಬಂದು ನೋಡಿ ಅಪರಿಚಿತ ಗಂಡಸೊಬ್ಬನನ್ನು ಕಂಡು ಮಗು ಸುಳ್ಳುಹೇಳುತ್ತಿದೆಯೆಂದು ತಿಳಿಯಬಹುದು. "ಅಪ್ಪ" ಎಂದರೆ ತನ್ನ ತಂದೆಯೆಂದರಿತುಕೊಳ್ಳುವ ಮೊದಲು, ಮಗುವು ಗಂಡಸಿನ ವೇಷಭೂಷಣದಲ್ಲಿರುವ ಯಾವ ವ್ಯಕ್ತಿಯು ನ್ನಾದರೂ "ಅಪ್ಪ" ಅಥವಾ "ಅಣ್ಣ" ಎಂದು ಗುರುತಿಸುವುದು ಆದುದರಿಂದ ಮಗುವಿನ ಹೇಳಿಕೆಯನ್ನು ಸುಳ್ಳು ಎಂದು ಕರೆಯುವುದಕ್ಕಿಂತ ಭಾಷೆಯ ಅಜ್ಞಾನವೆನ್ನುವುದು ನ್ಯಾಯ ವಾದುದು.

ಕೆಲವು ಸಂದರ್ಭಗಳಲ್ಲಿ ಮಗುವು ತನ್ನದೇ ಆದ ಒಂದು ಅರ್ಥದಲ್ಲಿ ಭಾಷೆಯನ್ನುಪಯೋಗಿಸುತ್ತದೆ. ಉದಾಹರಣೆಗೆ ಹಾಲನ್ನು ಚೆಲ್ಲಿದಾಗ ಅಥವಾ ಯಾವುದಾದರೂ ಸಾಮಾನನ್ನು ಒಡೆದುಹಾಕಿದಾಗ ತಾಯಿಯು ಶಿಕ್ಷಿಸಲು ಬಂದರೆ, "ಇಲ್ಲ, ಇಲ್ಲ" ಎಂದು ಅಳತೊಡಗಬಹುದು. "ಇಲ್ಲ, ಇಲ್ಲ" ಎಂದರೆ ನಮಗೆ ಅರ್ಥವಾಗುವುದು ಮಗು ಮಾಡಿಬಿಟ್ಟು ಇಲ್ಲ ಎಂದು ಸುಳ್ಳು ಹೇಳುತ್ತಿದೆ ಎಂದು. ಆದರೆ ಮಗುವಿನ ಅರ್ಥದಲ್ಲಿ "ಇನ್ನು ಮೇಲೆ ಮಾಡುವುದಿಲ್ಲ" ಅಥವಾ "ಶಿಕ್ಷಿಸಬೇಡ" ಎಂದಿರಬಹುದು.

ಮತ್ತೆ ಕೆಲವು ಸಂದರ್ಭಗಳಲ್ಲಿ ಮಗುವಿಗೆ ಸತ್ಯಾಸತ್ಯತೆಗಳ ವ್ಯತ್ಯಾಸ ತಿಳಿದಿರುವುದಿಲ್ಲ. ಉದಾಹರಣೆಗೆ ಮಗುವು, "ದಾರಿ ಯಲ್ಲಿ ಬರುವಾಗ ಆನೆಯನ್ನು ನೋಡಿದೆ, ಸರ್ಕಸ್ ಹುಲಿ ಯನ್ನು ಹಿಡಿದುಕೊಂಡು ಹೋಗುತ್ತಿದ್ದರು," ಮುಂತಾಗಿ

ಹೇಳುವುದುಂಟು. ಇಲ್ಲಿ ಅದು ಸುಳ್ಳು ಹೇಳುತ್ತಿಲ್ಲ. ಅದು ತನ್ನ ಕಲ್ಪನಾರಾಜ್ಯದಲ್ಲಿ ವಿಹರಿಸುತ್ತಾ ಬಗೆಬಗೆಯ ಅನುಭವ ಗಳನ್ನು ಚಿತ್ರಿಸುತ್ತದೆ. ಚಿಕ್ಕ ಮಕ್ಕಳಲ್ಲಿ ಇದು ಸಹಜ ಮತ್ತು ಅತ್ಯಾವಶ್ಯಕ. ವಾಸ್ತವವಾಗಿ ನೋಡಿದ ಮತ್ತು ಕೇಳಿದ ಸಂಗತಿಗಳನ್ನು ವರ್ಣಿಸುವಾಗ ಮಗುವು ವಯೋ ಧರ್ಮಕ್ಕನುಸಾರವಾಗಿ ತಪ್ಪು ಹೇಳುವುದುಂಟು. ಅದನ್ನು ಸುಳ್ಳು ಎಂದು ಕರೆಯಲಾಗುವುದಿಲ್ಲ ಏಕೆಂದರೆ ಯಾವ ಒಂದು ಹೇಳಿಕೆಯಾಗಲಿ ಸುಳ್ಳೆನಿಸಿಕೊಳ್ಳಬೇಕಾದರೆ ಹಿನ್ನೆಲೆ ಯಲ್ಲಿ ಒಂದು ಉದ್ದೇಶವಿರಬೇಕು. ಮತ್ತು ಹೇಳುವ ಮಗು ಅದನ್ನರಿತಿರಬೇಕು. ಹಿರಿಯರ ಹಾಗೆ ಉದ್ದೇಶಪೂರ್ವಕವಾಗಿ ಸುಳ್ಳು ಹೇಳುವುದನ್ನು ಮಗು ಬುದ್ಧಿ ತಿಳಿದಮೇಲೆ ಇತರರನ್ನು ನೋಡಿ ಕಲಿಯುತ್ತದೆ.

ಸುಳ್ಳಿನಲ್ಲಿ ನಾನಾ ಬಗೆಗಳುಂಟು :

ಮೊದಲನೆಯದಾಗಿ ಸತ್ಯಕ್ಕೆ ವ್ಯತಿರಿಕ್ತವಾಗಿ ನುಡಿಯುವುದು. ಮಗು ಶೀಶೆಯನ್ನೋ ಗಾಜಿನ ಬಟ್ಟಲನ್ನೋ ಒಡೆದಾಗ, ತಾನು ಒಡೆಯಲಿಲ್ಲವೆಂದು ಹೇಳುವುದು; ಮನೆ ಪಾಠವನ್ನು ಬರೆಯ ದಿದ್ದರೂ ಬರೆದೆನೆಂದು ಹೇಳುವುದು.

ಎರಡನೆಯದಾಗಿ ನಿಜ ಸಂಗತಿಯನ್ನು ಉತ್ಪ್ರೇಕ್ಷೆಮಾಡಿ ಹೇಳುವುದು. ಶಾಲೆಯಲ್ಲಿ ಉಪಾಧ್ಯಾಯರ ಸಹಜ ಮೆಚ್ಚಿಕೆ ಯನ್ನು ಅತಿಯಾದ ಪ್ರಸಂಶೆಯನ್ನಾಗಿ ಮಾರ್ಪಾಡುಮಾಡಿ ಹೇಳುವುದು. ತಂದೆಯ ಪ್ರತಿಷ್ಠೆ, ಉತ್ಪತ್ತಿ, ಗೌರವಗಳನ್ನು ಬೃಹದಾಕಾರವಾಗಿ ವರ್ಣಿಸುವುದು.

ಮೂರನೆಯದಾಗಿ ಕಟ್ಟು ಕಥೆ. ಮಗು ಶಾಲೆಯಿಂದ

ಹಿಂದಿರುಗಿ ಬಹಳ ಆಸಕ್ತಿಯಿಂದ ಬೆಂಕಿಯ ಅನಾಹುತವನ್ನೋ ಅಥವಾ ಕಾರಿನ ಅಪಘಾತವನ್ನೋ ರಸವತ್ತಾಗಿ ವರ್ಣಿಸುತ್ತದೆ. ವಾಸ್ತವವಾಗಿ ಅದು ನಡದೇ ಇರುವುದಿಲ್ಲ. ತಾನು ಬೇಸಿಗೆ ರಜದಲ್ಲಿ ಊರೂರು ಸುತ್ತಿ ಬಂದುದನ್ನು ಒಡನಾಡಿಗಳಿಗೆ ಬಣ್ಣಿಸಿ ಹೇಳುತ್ತದೆ. ಆದರೆ ನಿಜವಾಗಿ ಅದಕ್ಕೆ ಆ ತರಹೆಯ ಯಾವ ಅನುಭವವೂ ಆಗಿರುವುದಿಲ್ಲ ಮತ್ತು ರಜದಲ್ಲಿ ಎಲ್ಲಿಗೂ ಹೋಗಿರುವುದಿಲ್ಲ.

ನಾಲ್ಕನೆಯದಾಗಿ ಕಲ್ಪನೆ. ಮಗುವನ್ನು ಚಿಕ್ಕಮ್ಮನ ಮನೆಗೋ ಅಕ್ಕನ ಮನೆಗೋ ಹೋಗಿ ಬಾ ಎಂದು ಹೇಳಿ ಕಳುಹಿಸಿದರೆ ಅಲೆದಾಟದಲ್ಲಿ ಕಾಲಹರಣಮಾಡಿ ಮನೆಗೆ ಬಂದಾಗ ಅಲ್ಲಿಯ ಸಮಾಚಾರವನ್ನು ಕೇಳಿದರೆ ನಿಜಸಂಗತಿ ಗೊತ್ತಿಲ್ಲದೆ ತನ್ನದೇ ಆದ ವರದಿಯನ್ನು ಒಪ್ಪಿಸುತ್ತದೆ

ಐದನೆಯದಾಗಿ ತನ್ನ ತಪ್ಪನ್ನು ಇತರರ ಮೇಲೆ ಹಾಕುವುದು, ಹಾಲನ್ನು ತಾನು ಚೆಲ್ಲಿದರೂ ಕೆಲಸದ ಹುಡುಗಿಯ ಮೇಲೋ, ಬೆಕ್ಕಿನ ಮೇಲೋ, ಅಥವಾ ಒಡಹುಟ್ಟಿದವರ ಮೇಲೋ ಹೇಳಿಬಿಡುತ್ತದೆ. ಆದರೆ ಇಲ್ಲಿ ಸ್ವಲ್ಪವಾದರೂ ನಡೆದ ಸಂಗತಿಯಿರುತ್ತವೆ. ಏನೆಂದರೆ ಹಾಲು ಚೆಲ್ಲಿ ಹೋದುದು. ಮೇಲೆ ತಿಳಿಸಿದ ಇತರ ಬಗೆಯ ಸುಳ್ಳುಗಳಲ್ಲಿ ಯಾವ ತರಹದ ಸತ್ಯಾಂಶವೂ ಇರುವುದಿಲ್ಲ.

ಮಕ್ಕಳು ಕೆಲವು ವೇಳೆ ಬಹಳ ಚತುರತೆಯಿಂದ ಸುಳ್ಳು ಹೇಳುತ್ತವೆ. ನಮಗೆ ಅವರು ಹೇಳುವುದು ವಾಸ್ತವವೆಂದೇ ತೋರುವುದು. ಸುಲಭವಾಗಿ ಸುಳ್ಳು ಎಂದು ಪತ್ತೆ ಮಾಡಲಾಗುವುದಿಲ್ಲ. ಅವರ ಉದ್ದೇಶ ಅಥವಾ ದುರುದ್ದೇಶಗಳನ್ನು ಈ ಬಗೆಯ ಸುಳ್ಳು ಸಮರ್ಪಕವಾಗಿ ಸಾಧಿಸುತ್ತದೆ. ಕೆಲವು

ವೇಳೆ ಮಕ್ಕಳ ಸುಳ್ಳು ಅಷ್ಟು ಬುದ್ಧಿವಂತಿಕೆಯುದಾಗಿರುವುದಿಲ್ಲ. ಹೇಳಿದ ಕೂಡಲೇ ಸುಳ್ಳು ಎಂದು ಗ್ರಹಿಸಿಬಿಡಬಹುದು. ಮತ್ತು ಮಗುವಿನ ಉದ್ದೇಶ ಕೈಗೂಡುವುದೂ ಇಲ್ಲ. ಮತ್ತೆ ಕೆಲವು ಮಕ್ಕಳು ತಮಗೆ ಪ್ರಯೋಜನಕಾರಿಯಾದ ಯಾವ ಒಂದು ನಿರ್ದಿಷ್ಟ ಉದ್ದೇಶವೂ ಇಲ್ಲದೆ ಅತಿಯಾದ ಸುಳ್ಳನ್ನು ಹೇಳುತ್ತವೆ. ಈ ಚಾಳಿ ದೊಡ್ಡವರಲ್ಲಿ ಕೂಡ ಕಂಡು ಬರುವುದು. ಈ ವ್ಯಕ್ತಿಗಳ ಸುಳ್ಳಿಗೆ ಯಾರೇ ಆಗಲಿ ಅಥವಾ ಯಾವ ಒಂದು ವಿಚಾರವೇ ಆಗಲಿ ತುತ್ತಾಗಬಹುದು. ನಿರಾತಂಕವಾಗಿ ಸುಳ್ಳಿನ ಕಂತೆಗಳನ್ನೇ ಪೋಣಿಸಿ ಬಿಡುತ್ತಾರೆ. ಇಂತಹ ನಡವಳಿಕೆಯು ಬಹುತರವಾಗಿ ವಿಕಲ್ಪರೂಪವಾಗಿರುತ್ತದೆ. ಈ ಗುಂಪಿಗೆ ಸೇರಿದ ಚಿಕ್ಕ ಮಕ್ಕಳಲ್ಲಿ ಇದು ಅಷ್ಟಾಗಿ ಇಲ್ಲದಿದ್ದರೂ, ದೊಡ್ಡವರಾಗಿ ಬೆಳೆಯುತ್ತಾ ಬಂದ ಹಾಗೆಲ್ಲ ಹೆಚ್ಚು ಹೆಚ್ಚಾಗಿ ಕಾಣಿಸಿಕೊಳ್ಳುವುದು.

ಸಾಮಾನ್ಯವಾಗಿ ಸುಳ್ಳು ಮೂರು ಬಗೆಯ ಸನ್ನಿವೇಶಗಳಲ್ಲಿ ಉದ್ಭವಿಸುವುದು.

೧ ಸುಳ್ಳು— ರಕ್ಷಣೋಪಾಯವಾಗಿ. ಮಗುವು ಬೆಲೆಬಾಳುವ ವಸ್ತು ಒಂದನ್ನು ಅಕಸ್ಮಾತ್ತಾಗಿ ಒಡೆಯಬಹುದು ಹಿಂದಿನ ಅನುಭವಗಳಿಂದಾಗಿ, ತಾಯಿತಂದೆಗಳು ಶಿಕ್ಷಿಸುವುದು ಖಂಡಿತವೆಂದು ಅದಕ್ಕೆ ಗೊತ್ತು. ತನಗಾಗಲಿರುವ ಶಿಕ್ಷೆಯನ್ನು ಸುಳ್ಳಿನ ಮೂಲಕ ಪರಿಹರಿಸಲೆತ್ನಿಸುತ್ತದೆ ಹಿರಿಯರ ಶಿಕ್ಷೆ ಕಠಿಣವಾದಷ್ಟು ಮಕ್ಕಳು ಹೆಚ್ಚು ಹೆಚ್ಚು ಭಯಗೊಳ್ಳುತ್ತಾರೆ ಮತ್ತು ಹೆಚ್ಚು ಹೆಚ್ಚಾಗಿ ಸುಳ್ಳನ್ನು ನಿವಾರಣೋಪಾಯವಾಗಿ ಬಳಸುತ್ತಾರೆ. ಕ್ರಮೇಣ ರಕ್ಷಣೆಗಾಗಿ ಸುಳ್ಳು ಹೇಳುವುದು ಅಭ್ಯಾಸವಾಗಿ ಬಿಡುವುದು.

೨ ಸುಳ್ಳು— ಹಿರಿಯರನ್ನು ಅನುಕರಿಸಿ. ಮನೆಯಲ್ಲಿ ಹಿರಿಯರು ತಮ್ಮ ಅನುಕೂಲಕ್ಕಾಗಿ ನಾನಾ ರೀತಿಯಲ್ಲಿ ಸುಳ್ಳು ಹೇಳುವುದನ್ನು ಮಕ್ಕಳು ಬಹಳ ಸೂಕ್ಷ್ಮವಾಗಿ ಗ್ರಹಿಸುತ್ತವೆ. ತಂದೆಯು ಕಂದಾಯದವರೋ ಅಥವಾ ಚಂದಾ ವಸೂಲಿಗಾರರೋ ಬರುತ್ತಿರುವುದನ್ನು ನೋಡಿ "ಮನೆಯಲಿಲ್ಲ" ಎಂದು ತಿಳಿಸುವಂತೆ ಮಗುವಿಗೆ ಹೇಳಿಕೊಡುತ್ತಾನೆ. ತಾಯಿಯು ಕೈಕೂಸಿಗೆ ಹುಷಾರಿಲ್ಲದಾಗ ಅಥವಾ ನೆಂಟರಿಷ್ಟರ ಮನೆಗೆ ಹೋಗಬೇಕಾದಾಗ ಮಗುವಿನ ಶಾಲೆ ತಪ್ಪಿಸಿ, ನಂತರ "ಮೇಷ್ಟ್ರಿಗೆ ಹೊಟ್ಟೆ ನೋವು ಬಂದಿತ್ತು ಎಂದು ಹೇಳಿಬಿಡು, ಸುಮ್ಮನಾಗಿ ಬಿಡುತ್ತಾರೆ" ಎಂದು ಮಗುವಿಗೆ ಸೂಚಿಸುತ್ತಾಳೆ. ಮಕ್ಕಳು ತಾಯಿ ತಂದೆಗಳ ಈ ಬಗೆಯ ಕೃತ್ಯಗಳನ್ನು ನೋಡಿ ಸುಳ್ಳಿನಲ್ಲಿ ಮೊದಲ ಪಾಠವನ್ನು ಪಡೆಯುತ್ತಾರೆ. ಮುಂದೆ ತಾವೂ ತಮ್ಮ ಅನುಕೂಲಕ್ಕಾಗಿ ಅದೇ ರೀತಿ ಸುಳ್ಳು ಹೇಳಲುಪಕ್ರಮಿಸುತ್ತಾರೆ.

೩. ಸುಳ್ಳು—ಇತರರ ಗಮನ ಮತ್ತು ಮೆಚ್ಚಿಗೆಗಾಗಿ, ಮಕ್ಕಳಿಗೆ ಜಂಭಕೊಚ್ಚಿ ಮತ್ತು ದೊಡ್ಡಸ್ತಿಕೆಯನ್ನು ತೋರಿಸಿ ಆ ಮೂಲಕ ಒಡನಾಡಿಗಳ ಗಮನ ಮತ್ತು ಮೆಚ್ಚಿಕೆ ಪಡೆಯಲು ಬಹು ಇಷ್ಟ. ಹಿರಿಯಣ್ಣ ಪದವೀಧರನಾದರೆ, ತಂದೆ ಕಾರು ತೆಗೆದುಕೊಂಡರೆ, ಅಥವಾ ಸರ್ಕಸ್ಸಿನವರು ಪಕ್ಕದ ಮನೆಯನ್ನು ಬಾಡಿಗೆಗೆ ತೆಗೆದುಕೊಂಡರೆ ಆ ಹುಡುಗ ಶಾಲೆಯಲ್ಲೇ ಪ್ರಮುಖ ವ್ಯಕ್ತಿ. ಎಲ್ಲರ ಗಮನವೂ ಅವನ ಮಾತಿನಲ್ಲಿ ಕೇಂದ್ರೀಕೃತವಾಗುವುದು ಸಹಜ. ಇಂತಹ ಆಸೂಯಾಕಾರಿಯಾದ ಅನುಭವಗಳು ಮಗುವಿನ ಜೀವನದಲ್ಲಿ ಒದಗದಿದ್ದ ಪಕ್ಷದಲ್ಲಿ ಕಥೆ

ಕಟ್ಟೆ ಶಾಲೆಯಲ್ಲಿ ಮಾತನಾಡುತ್ತದೆ. ಒಡನಾಡಿಗಳು ಅದರ ಮಾತಿನಲ್ಲಿ ಅಪನಂಬಿಕೆಯನ್ನು ವ್ಯಕ್ತಪಡಿಸಿದರೆ, ತಾನು ಹೇಳಿದ್ದನ್ನು ಧೃಢಪಡಿಸಲು ಹೆಚ್ಚು ಹೆಚ್ಚು ವಿವರಗಳನ್ನು ಕೊಡುತ್ತಾ ಆದಷ್ಟು ನಂಬಲರ್ಹವಾಗುವಂತೆ ಮಾತನಾಡುತ್ತದೆ. ಕ್ರಮೇಣ ಅದು ಸುಳ್ಳು ಹೇಳುವುದರಲ್ಲಿ ನಿಸ್ಸೀಮವಾಗುತ್ತದೆ ರೋಮಾಂಚಕಾರಿಯಾದ ಮತ್ತು ಇತರರು ಕರುಬುವಂತಹ (ಮಕ್ಕಳ ದೃಷ್ಟಿಯಲ್ಲಿ) ಅನುಭವಗಳು ಯಾವ ಮಗುವಿಗೆ ಇರುವುದಿಲ್ಲವೋ ಅದು ತನಗಾದ ನಷ್ಟವನ್ನು ಸರಿದೂಗಿಸಲು ಸುಳ್ಳಿನ ಮರೆಹೊಕ್ಕು ಬಡಾಯಿ ಕೊಚ್ಚಿಕೊಳ್ಳುತ್ತದೆ.

ಮಕ್ಕಳಿಗೆ ಸುಳ್ಳು ಹೇಳುವ ಅಭ್ಯಾಸವಾದ ಮೇಲೆ ಅದನ್ನು ಬಿಡಿಸುವುದು ಕಷ್ಟ. ಆದುದರಿಂದ ಆದಷ್ಟು ಪ್ರಥಮದಿಂದಲೇ ಸುಳ್ಳಿನ ಪ್ರಚೋದನೆಗಳನ್ನು ತಡೆಗಟ್ಟುವುದು ಒಳ್ಳೆಯದು. ಶಿಕ್ಷೆಯ ಮೂಲಕ ಸುಳ್ಳು ಹೇಳುವುದನ್ನು ತಪ್ಪಿಸಲು ಎಂದಿಗೂ ಪ್ರಯತ್ನಿಸಬಾರದು. ಹಾಗೆ ಮಾಡಿದಲ್ಲಿ ಮಗು ಉಪಾಯವಾದ ರೀತಿಯಲ್ಲಿ ಸುಳ್ಳು ಹೇಳುವುದನ್ನು ಪ್ರಾರಂಭಿಸುತ್ತದೆ. ಯಾವಾಗಲೂ ನಿಜವನ್ನೇ ಹೇಳಿಸಬೇಕೆಂದು 'ಪೆಪ್ಪರ್‌ಮೆಂಟು ಚಾಕಲೇಟು ಕೊಡುತ್ತೇನೆ, ಸಿನಿಮಾಕ್ಕೆ ಕರೆದುಕೊಂಡು ಹೋಗುತ್ತೇನೆ' ಎಂದು ಆಸೆ ತೋರಿ ಸುಳ್ಳನ್ನು ತಪ್ಪಿಸ ಹೋದರೆ ಪ್ರಯೋಜನವಿಲ್ಲ. ಬಹುಕಾಲ ಈ ಬಗೆಯ ಲಂಚ ಪರಿಣಾಮಕಾರಿಯಾಗುವುದಿಲ್ಲ. ಸಾಧ್ಯವಾದಷ್ಟು ಮಕ್ಕಳ ಎದುರಿನಲ್ಲಿ ಸುಳ್ಳು ಹೇಳದಿರುವ ಹಾಗೆ ಹಿರಿಯರು ಎಚ್ಚರಿಕೆಯಿಂದಿರಬೇಕು. ಹಾಗೂ ನಿಜವಲ್ಲದುದನ್ನು ಹೇಳಲೇಬೇಕಾದಾಗ ಅದರ ಉದ್ದೇಶವನ್ನು ಮಗುವಿಗೆ ತಿಳಿಯುವ ರೀತಿ ಸರಳವಾಗಿ ವಿವರಿಸಬೇಕು.

ಉದಾಹರಣೆಗೆ, ಪಕ್ಕದ ಮನೆಯವರು ವಿಶ್ವಾಸದಿಂದ ಕಳುಹಿಸಿದ ತಿಂಡಿ ಸುಮಾರಾಗಿದ್ದರೂ ಚೆನ್ನಾಗಿದೆಯೆಂದು ಮಗುವಿಗೆ ಹೇಳುವುದು ಒಳ್ಳೆಯದು. ಮಗುವಿಗೆ ಹಾಗೆ ಹೇಳುವುದು ಸೌಜನ್ಯದ ಕುರುಹು ಮತ್ತು ಇತರರ ಮನ ನೋಯುವುದಿಲ್ಲ. ಯಾವ ಕಾರಣಕ್ಕಾದರೂ ಮಗು ಸುಳ್ಳು ಹೇಳಿದರೆ, ಕ್ಷಣಿಕವಾಗಿ ಅದರಿಂದ ಪರಿಹಾರ ದೊರೆತರೂ ಕೊನೆಯಲ್ಲಿ ಹೇಗೆ ಮನಸ್ಸು ನೆಮ್ಮದಿಯಲ್ಲಿರುವುದಿಲ್ಲವೆಂಬುದನ್ನು ಮಗು ಅರ್ಥಮಾಡಿಕೊಳ್ಳಲು ಸಹಾಯಮಾಡಬೇಕು. ಬಡಾಯಿಗಾಗಿ ಸುಳ್ಳು ಹೇಳುವುದನ್ನು ಸಾಧ್ಯವಾದಷ್ಟು ಕಡಿಮೆ ಮಾಡಲು ಮಕ್ಕಳಿಗೆ ಆಗಾಗ್ಗೆ ಹೊಸ ಹೊಸ ಅನುಭವಗಳನ್ನು ಯೋಗ್ಯ ರೀತಿಯಲ್ಲಿ ಒದಗಿಸಬೇಕು ಯಾವಾಗಲಾದರೊಮ್ಮೆ ಪ್ರೇಕ್ಷಣೀಯ ಸ್ಥಳಗಳಿಗೆ ಕರೆದುಕೊಂಡು ಹೋದರೆ, ಮಕ್ಕಳಿಗಾಗಿ ಮನೆಯಲ್ಲಿ ಸಣ್ಣಪುಟ್ಟ ಸಮಾರಂಭಗಳನ್ನೇರ್ಪಡಿಸಿದರೆ ಅಷ್ಟೇಸಾಕು. ಇತರರ ಗಮನ ಸೆಳೆಯಲು ಮಗು ಸುಳ್ಳು ಹೇಳುತ್ತಿದೆಯೆಂದ ಗೊತ್ತಾದಾಗ ನಿರ್ಲಕ್ಷ್ಯಭಾವದಿಂದಿದ್ದರೆ, ಮಗುವು ತನ್ನ ಪ್ರಯತ್ನದ ವಿಫಲತೆಯನ್ನು ಸುಳ್ಳುಹೇಳುವುದನ್ನೂ ಮರೆಯುತ್ತದೆ.

"ದಾರಿತಪ್ಪಿದ" ಮಕ್ಕಳ ಕಳ್ಳತನ ಯಾವ ರೂಪವನ್ನಾದರೂ ತಾಳಬಹುದು. ಕೈಗೆ ಸುಲಭವಾಗಿ ಸಿಗುವ ಸಾಮಾನುಗಳನ್ನು ತೆಗೆದುಕೊಂಡು ಬಿಡಬಹುದು. ಅಥವಾ ಮನೆಗೆ ನುಗ್ಗಿ ಕಳ್ಳತನ ಮಾಡಬಹುದು. ಅಥವಾ ಇತರರ ಮೇಲೆ ಬಿದ್ದು ಬಲಪ್ರಯೋಗಮಾಡಿ ಅಪಹಾರಮಾಡಬಹುದು.

ಮಕ್ಕಳು ನಾನಾ ರೀತಿಯಲ್ಲಿ ಕಳ್ಳತನ ಮಾಡುತ್ತವೆ. ಬಹಳ ಬುದ್ಧಿವಂತಿಕೆಯಿಂದ ತಕ್ಷಣ ಪತ್ತೆ ಆಗದಂತೆ ಕದಿಯು

ಬಹುದು. ಅನಾವಶ್ಯಕವಾಗಿ ಯಾವ ಎಚ್ಚರಿಕೆಯೂ ಇಲ್ಲದೆ ಸುಲಭವಾಗಿ ಸಿಕ್ಕಿಹಾಕಿಕೊಳ್ಳುವ ರೀತಿಯಲ್ಲಿ ಕದಿಯಬಹುದು. ಸಮಯ ದೊರೆತಾಗ ಆಸೆ ಮತ್ತು ಪ್ರೇರೇಪಣೆಗೆ ಬಲಿಯಾಗಿ ಕಳ್ಳತನ ಮಾಡಬಹುದು. ತನಗೆ ಬೇಕಾದ ಸಾಮಾನುಗಳನ್ನು ಮಾತ್ರ ಅಪಹರಿಸಬಹುದು. ಇದು ಬೇಕಾದದ್ದು, ಇದು ಬೇಡವಾದದ್ದು ಎಂಬ ಯಾವ ತಾರತಮ್ಯವೂ ಇಲ್ಲದೆ ಕೈಗೆ ಸಿಕ್ಕಿದ ವಸ್ತುಗಳನ್ನು ತೆಗೆದುಕೊಂಡುಬಿಡಬಹುದು ಕೆಲವು ವೇಳೆ ಮಕ್ಕಳು ಒಬ್ಬಂಟಿಗರಾಗಿ ಯಾವ ಪ್ರಚೋದನೆಯೂ ಇಲ್ಲದೆ ತಾವಾಗಿ ಕದಿಯುವುದುಂಟು. ಮತ್ತೆ ಕೆಲವು ಸಂದರ್ಭ ಗಳಲ್ಲಿ ಇತರ ಮಕ್ಕಳೊಡನೆ ಸೇರಿ ಕಳ್ಳತನಕ್ಕೆ ತೊಡಗುವುದೂ ಉಂಟು. . ಹೀಗೆ ಗುಂಪಿನಲ್ಲಿರುವಾಗ ಯಾವ ರೀತಿ ಭಾಗವಹಿ ಸಿದನೆಂಬುದನ್ನು ಗಮನಿಸುವುದು ಅವಶ್ಯಕ— ಅವನೇ ಎಲ್ಲ ವನ್ನು ಯೋಚಿಸಿ ಇತರರಿಗೆ ಮಾರ್ಗದರ್ಶಕನಾದನೇ ಅಥವಾ ಗುಂಪಿನ ಮುಂದಾಳು ಹೇಳಿದ ರೀತಿ ನಡೆದುಕೊಂಡನೇ ಅಥವಾ ಒಡನಾಡಿಗಳು ಕಳ್ಳತನದಲ್ಲಿ ತೊಡಗಿದ್ದಾಗ ಯಾರಾ ದರೂ ಕಂಡಾರೆಂದು ಕಾವಲು ಕಾಯುತ್ತಿದ್ದನೇ ಮೊದಲಾದ ಅಂಶಗಳು ಮುಖ್ಯವಾದುವು.

ಮಕ್ಕಳು ಕದಿಯುವ ವಸ್ತುಗಳು ಇಂಥವೇ ಎಂದು ನಿರ್ದಿಷ್ಟ ವಾಗಿ ಹೇಳುವುದಕ್ಕಾಗುವುದಿಲ್ಲ. ಸಾಮಾನ್ಯವಾಗಿ ಶಾಲೆ ಯಲ್ಲಿ ಅಕ್ಕಪಕ್ಕದವರಿಂದ ಪುಸ್ತಕ, ಬರವಣಿಗೆಯ ಸಾಮಗ್ರಿ ಗಳು. ಬುಗುರಿ, ಟೇಪು, ಹೇರ್‌ಪಿನ್ನುಗಳು ಮತ್ತು ಚಿಲ್ಲರೆ ಕಾಸು ಗಳನ್ನು ಹಾರಿಸುವರು. ಮನೆಯಲ್ಲಿ ಹೆಚ್ಚಾಗಿ ಹಣವನ್ನು ಮಾತ್ರ ಅಪಹರಿಸುವರು. ಪಡ್ಡೆ ಹುಡುಗರು ಸೈಕಲ್ಲು ಲ್ಯಾಂಪು ಗಳು, ಮೋಟಾರು ಸಾಮಾನುಗಳು, ತೋಟಗಳಿಂದ ಹಣ್ಣು,

ತರಕಾರಿ, ಹೂವು, ಎಳನೀರು ತೆಂಗಿನಕಾಯಿ ಮುಂತಾದ ವಸ್ತುಗಳನ್ನು ಕದಿಯುತ್ತಾರೆ.

ಸುಳ್ಳು ಹೇಳುವುದು ಹೇಗೆ ಹುಟ್ಟುಗುಣವಲ್ಲವೋ ಹಾಗೆ ಕಳ್ಳತನ ಕೂಡ ಹುಟ್ಟುಗುಣವಲ್ಲ. ಅದು ಕಲಿತ ವಿದ್ಯೆ. ಮಗು ಎಳೆಯ ವಯಸ್ಸಿನಲ್ಲಿ "ತನ್ನದು" ಮತ್ತು "ಇನ್ನೊಬ್ಬರದು" ಎಂದರೇನೆಂಬುದನ್ನು ಅರಿತಿರುವುದಿಲ್ಲ. ಈ ಜ್ಞಾನ ಕ್ರಮೇಣವಾಗಿ ಬರುವುದು. ಸಣ್ಣದಾಗಿದ್ದಾಗ ಹಿರಿಯರು ಅದಕ್ಕೆ ಬೇಕಾದ ಸಾಮಾನುಗಳನ್ನು ಒದಗಿಸುತ್ತಾರೆ. ಮೇಜಿನ ಮೇಲಿರುವ ರಟ್ಟಿನ ಡಬ್ಬ, ಬೀರುವಿನಲ್ಲಿರುವ ಬುಗುರಿ ಮತ್ತು ಆಟದ ಸಾಮಾನು, ಮೇಲೆತ್ತಿಟ್ಟಿರುವ ಆಟದ ಗಾಲಿ ಮೊದಲಾದ ಆಡುವ ವಸ್ತುಗಳನ್ನು ಅದಕ್ಕೆ ಹಿರಿಯರು ತೆಗೆದುಕೊಡುತ್ತಾರೆ. ಸ್ವಲ್ಪ ದೊಡ್ಡದಾದ ಮೇಲೆ ಮಗುವು ತಾನಾಗಿಯೇ ಕೈಗೆ ಎಟಕುವ ಸಾಮಾನುಗಳನ್ನು ಬೇಕಾದಾಗ ತೆಗೆದುಕೊಳ್ಳಲುಪಕ್ರಮಿಸುತ್ತದೆ. ಇದಕ್ಕೆ ಕೆಲವು ಸಾರಿ ಹಿರಿಯರಿಂದ ಅಸಮ್ಮತಿ ದೊರೆಯುವುದು. ಮತ್ತೆ ಕೆಲವು ಸಂದರ್ಭಗಳಲ್ಲಿ ಅವರು ಸುಮ್ಮನಾಗಿ ಬಿಡುತ್ತಾರೆ ಹೀಗೆ ಸುಮಾರು ಎರಡು ಎರಡೂವರೆ ವರ್ಷದ ಮಗುವು ಯಾವ ಯಾವ ಸಾಮಾನುಗಳನ್ನು ತೆಗೆದುಕೊಳ್ಳಬಹುದು, ಯಾವ ಯಾವುದನ್ನು ತಾನು ಮುಟ್ಟಬಾರದು ಎಂಬುದನ್ನು ತಿಳಿದುಕೊಳ್ಳುತ್ತದೆ. ಆದರೂ ಆ ವಯಸ್ಸಿನಲ್ಲಿ ತನ್ನದು ಮತ್ತು ಇನ್ನೊಬ್ಬರದು ಎಂಬ ತಾರತಮ್ಯವು ಗೊತ್ತಾಗುವುದಿಲ್ಲ ತನ್ನ ಸುತ್ತಲಿರುವ ಸಾಮಾನುಗಳಲ್ಲಿ ಯಾವುದನ್ನು ತಾನೂ ಮುಟ್ಟಬಹುದು, ತೆಗೆದುಕೊಂಡು ಆಡಬಹುದು ಮತ್ತು ಯಾವುದನ್ನು ಇಟ್ಟಲ್ಲಿಯೇ ಇರಗೊಡಬೇಕು ಎಂಬುದು ಮಾತ್ರ

ಆದಕ್ಕೆ ಅರ್ಥವಾಗುವುದು. ಮಗುವು ಇನ್ನೂ ದೊಡ್ಡದಾದ ಮೇಲೆ ತನ್ನ ಬಟ್ಟೆಗಳಾವುವು ತನ್ನ ಆಟದ ಸಾಮಾನು ಗಳಾವುವು, ತನ್ನ ತಟ್ಟೆ ಲೋಟಗಳಾವುವು ಎಂಬುದನ್ನು ಅರಿಯುತ್ತದೆ ಈಗಲೇ ಅದಕ್ಕೆ "ತನ್ನದು" ಎಂದರೇನೆಂಬುದು ಗೊತ್ತಾಗುವುದು. ಮಕ್ಕಳು ಈ ಘಟ್ಟವನ್ನು ಮುಟ್ಟಿದಾಗ ತಾಯಿತಂದೆಗಳು ತನ್ನ ಮತ್ತು ಇತರರ ಸಾಮಾನುಗಳನ್ನು ಬಳಸುವುದರ ನ್ಯಾಯಾನ್ಯಾಯಗಳ ಶಿಕ್ಷಣ ಕೊಡುವುದು ಅತ್ಯಾವಶ್ಯಕ. ಇಲ್ಲಿ ಮತ್ತೊಂದು ಅಂಶವೇನೆಂದರೆ ಹಿರಿಯರು ತಮ್ಮಿಷ್ಟದಂತೆ ಗೊತ್ತುಗುರಿಯಿಲ್ಲದೆ ತಮ್ಮ ವಯಸ್ಸಿನ ಬಲದ ಮೇಲೆ ಮಗುವಿನ ಸಾಮಾನನ್ನು ಎಂದಿಗೂ ಉಪಯೋಗಿಸಬಾರದು. ಮಗುವನ್ನು ಕೇಳಿ ಸಮ್ಮತಿ ಪಡೆದು ತೆಗೆದುಕೊಳ್ಳುವುದು ಒಳ್ಳೆಯದು ಇದರಿಂದ ಸೌಜನ್ಯವೆಂದ ರೇನೆಂಬುದನ್ನು ಮಗುವಿಗೆ ತೋರಿಸಿಕೊಟ್ಟಂತಾಗುವುದು. ಮಕ್ಕಳು ಈ ನಿಲುಗಡೆಯಲ್ಲಿರುವಾಗ, ತನ್ನ ಸ್ವತ್ತು ಇತರರ ಸ್ವತ್ತು ಎಂಬ ತಿಳುವಳಿಕೆಯಲ್ಲಿ ಏರುಪೇರಾಗುವ ಸಂದರ್ಭವು ಅನೇಕ ರೀತಿಯಲ್ಲಿ ಒದಗುವುದು. ಉದಾಹರಣೆಗೆ ಮಗುವು ಬಿಸ್ಕತ್ತು ಬೇಕೆಂದು ಕೇಳಿದಾಗ, ತಾಯಿಯು ಕೈಬಿಡುವಿಲ್ಲದಿದ್ದರೆ ಅಥವಾ ಬೇಜಾರಾಗಿದ್ದರೆ "ಅಲ್ಲಿಟ್ಟದ್ದೇನೆ ತೆಗೆದುಕೊ" ಎಂದು ಹೇಳುವುದುಂಟು. ಇನ್ನೊಮ್ಮೆ ಮಗುವಿಗೆ ಬೇಕೆನಿಸಿದಾಗ ಹಿಂದೆ ತಾಯಿಯು ತನ್ನನ್ನೇ ತೆಗೆದುಕೊಳ್ಳಲು ಹೇಳಿದ್ದನ್ನು ಜ್ಞಾಪಿಸಿಕೊಂಡು ಅದೇ ಬೀರುವಿನಿಂದ ತೆಗೆದುಕೊಂಡರೆ ತಾಯಿಯು "ಕಳ್ಳ" ಎಂದು ಮಗುವನ್ನು ಶಿಕ್ಷಿಸುತ್ತಾಳೆ. ಕೆಲವು ವೇಳೆ ಹಿರಿಯ ಮಕ್ಕಳು ಮಗುವಿನ ಪೆಟ್ಟಿಗೆಯಿಂದ ಅದಕ್ಕೆ ಕಾಣದ ಹಾಗೆ ಸಾಮಾನುಗಳನ್ನು ತೆಗೆದುಕೊಂಡು

ಬಿಡುತ್ತಾರೆ. ಮಗುವಿಗೆ ಆ ಸಾಮಾನು ಬೇಕಾದಾಗ ತನ್ನ ಪೆಟ್ಟಿಗೆಯಲ್ಲಿ ಕಾಣದೆ ಒಡಹುಟ್ಟಿದವರನ್ನು ವಿಚಾರಿಸಿದಲ್ಲಿ ತಮಗೆ ತಿಳಿಯದೆಂದು ಹೇಳಿಬಿಡುತ್ತಾರೆ. ಮುಂದೆ ಯಾವಾಗ ಲಾದರೂ ಮಗು ಅಕಸ್ಮಾತ್ತಾಗಿ ಅದು ಅವರ ಪೆಟ್ಟಿಗೆಯಲ್ಲಿ ಕಾಣಬಹುದು. ಈ ಬಗೆಯ ಘಟನೆಗಳು ಮಗುವನ್ನು ದಿಗ್ಭ್ರಾಂತಿಗೊಳಿಸುವುದಲ್ಲದೆ ಉದ್ದೇಶಪೂರ್ವಕವಾಗಿ ಇತರರಿಗೆ ತಿಳಿಯದಂತೆ ಸಾಮಾನುಗಳನ್ನು ತೆಗೆದುಕೊಳ್ಳುವುದನ್ನು ಪರಿಚಯಮಾಡಿಕೊಡುವುವು.

ಹಿರಿಯ ವಯಸ್ಸಿನ ಮಕ್ಕಳಲ್ಲಿ ಕೆಲವು ಸನ್ನಿವೇಶಗಳು ಕಳ್ಳತನಕ್ಕೆ ಉತ್ತೇಜನ ಕೊಡುವುವು. ಅತಿಯಾಗಿ ಮುದ್ದಿಸಲ್ಪಟ್ಟ ಮಕ್ಕಳಿಗೆ ತಮ್ಮ ಜವಾಬ್ದಾರಿಯನ್ನು ಅರಿತುಕೊಳ್ಳುವ ಅವಕಾಶವೇ ಇರುವುದಿಲ್ಲ ಏಕೆಂದರೆ ಅದು ಒಡಹುಟ್ಟಿದವರ ಸಾಮಾನುಗಳನ್ನು ತೆಗೆದುಕೊಂಡಾಗಲೆಲ್ಲ ಅಥವಾ ಹಾಳು ಮಾಡಿದಾಗಲೆಲ್ಲಾ ತಾಯಿ ತಂದೆಗಳು ಅದರ ಪರವಹಿಸುವರು. ಹಣ್ಣಿನಂಗಡಿಯಲ್ಲಿ ತಾಯಿ ವ್ಯಾಪಾರ ಮಾಡುತ್ತಿರುವಾಗ ಹುಡುಗನು ಒಂದು ಹಣ್ಣನ್ನು ಎತ್ತಿಕೊಂಡರೆ ಆಕೆಯು ಮರ್ಯಾದೆ ಉಳಿಸಿಕೊಳ್ಳಲು, ಹುಡುಗನಿಗೆ ಹಣ್ಣೆಂದರೆ ಬಹಳ ಇಷ್ಟವೆಂದು ಹೇಳಿ ನಾಲ್ಕೈದು ಹಣ್ಣುಗಳನ್ನು ಕೊಂಡು ಕೊಡುವಳು. ಅಪ್ಪನ ಜೇಬಿನಿಂದ ತೆಗೆದ ಚಿಲ್ಲರೆ ಕಾಸಿನಿಂದ ಮಿಠಾಯಿ ತಿಂದು ಏನೇನೋ ನೆಪಹೇಳಿ ತಪ್ಪಿಸಿಕೊಳ್ಳಲು ಪ್ರಯತ್ನಿಸಿದರೆ ತಾಯಿ ಆಶ್ಚರ್ಯ ವ್ಯಕ್ತಪಡಿಸುತ್ತಾ ಅಕ್ಕಪಕ್ಕದವರೊಡನೆ ಅವನ ಜಾಣ್ಮೆಯನ್ನು ಹೆಚ್ಚುಗಾರಿಕೆಮಾಡಿ ಹೇಳುವಳು. ಕೇಳದೆ ಸಾಮಾನುಗಳನ್ನು ತೆಗೆದುಕೊಂಡರೆ ದೇವರು ಕಣ್ಣು ಕಿತ್ತುಕೊಳ್ಳುತ್ತಾನೆ ಅಥವಾ ಅಪ್ಪ ಕೈ ಕತ್ತರಿಸಿ

ಹಾಕುತ್ತಾರೆ ಎಂಬ ಬೆದರಿಕೆಗಳು ವಾಸ್ತವವಾಗಿ ಸಂಭವಿಸು ವುದಿಲ್ಲ. ಇಂಥ ಸಂದರ್ಭಗಳಿಂದಾಗಿ ಹುಡುಗನಿಗೆ ಕಳವು ಮಾಡುವುದರಲ್ಲಿ ಏನು ತಪ್ಪೆಂಬುದು ಸರಿಯಾಗಿ ಅರ್ಥವಾಗು ವುದಿಲ್ಲ. ಆದುದರಿಂದ ತನಗೆ ಬೇಕಾದುದನ್ನು ಮನೆಯಲ್ಲಿ ಯಾಗಲೀ, ಶಾಲೆಯಲ್ಲಿಯಾಗಲೀ, ಅಥವಾ ಮತ್ತಿತರ ಕಡೆ ಗಳಲ್ಲಾಗಲೀ ಹಿಂದು ಮುಂದು ನೋಡದೆ ಅಪಹರಿಸುವುದನ್ನು ರೂಢಿ ಮಾಡಿಕೊಳ್ಳುತ್ತಾನೆ.

ಕೆಲವು ವೇಳೆ ಸಾಮಾನುಗಳ ಒಡೆತನಕ್ಕಾಗಿ ಕಳ್ಳತನ ಮಾಡುತ್ತಾರೆ. ಬಡವರ ಮನೆಯ ಮಕ್ಕಳಾದರೆ ಸಮಸ್ಯೆ ಮತ್ತೂ ತೊಡಕಾಗುವುದು. ಆರ್ಥಿಕ ಮುಗ್ಗಟ್ಟಿನಿಂದಾಗಿ ತನಗೆ ಬೇಕಾದ ಬಗೆಬಗೆಯ ವಸ್ತುಗಳನ್ನು ಕೊಳ್ಳಲಸಾಧ್ಯವಾಗಿರು ವಾಗ, ಸಮಯ ಒದಗಿದರೆ ಆಸೆಯನ್ನು ಬದಿಗೊತ್ತಲು ಹುಡುಗನು ಅಸಮರ್ಥನಾಗುವನು. ಮೊದಲು ಸ್ವಲ್ಪಕಾಲ ಹತ್ತಿರದಲ್ಲಿಟ್ಟುಕೊಂಡು ನೋಡಿ ಪುನಃ ಅಲ್ಲೇ ಇರಿಸಿ ಬಿಡುವು ದೆಂದು ನಿಷ್ಕರ್ಷಿಸಿ ತೆಗೆದುಕೊಂಡರೂ, ನಂತರ ಎಲ್ಲರೆದುರಿಗೆ ಹಿಂದಿರುಗಿಸಲು ಸಂಕೋಚವಾಗಿ ಅಥವಾ ಸಾಮಾನಿನ ಆಕ ರ್ಷಣೆಯಿಂದ ಬಿಡಿಸಿಕೊಳ್ಳಲಾಗದೇ ಅದನ್ನು ವಾಪಸ್ಸು ಮಾಡು ವುದನ್ನು ಮುಂದಕ್ಕೆ ತಳ್ಳುತ್ತಾ ಹೋಗುವನು. ಕೆಲವು ಸಾರಿ ವಾಪಸ್ಸು ಕೊಟ್ಟರೂ ಪ್ರತಿ ಸಲ ಹಾಗೆ ಮಾಡಲು ಮನಸ್ಸು ಬಾರದೆ, ತನ್ನಲ್ಲಿಯೇ ಇಟ್ಟುಕೊಳ್ಳುವ ಉದ್ದೇಶದಿಂದಲೇ ಕದಿಯತೊಡಗಬಹುದು. ಕೆಲವು ಸಂದರ್ಭಗಳಲ್ಲಿ ಹುಡುಗನು ಪ್ರಾಮಾಣಿಕತೆಯಿಂದ ಹಿಂದಿರುಗಿಸಿದಾಗ ಶಿಕ್ಷೆಗೆ ಒಳಗಾಗಿ, ಮುಂದೆ ವಾಪಸ್ಸು ಮಾಡುವ ಆಶೆಯನ್ನೇ ತೊರೆಯಬಹುದು.

ತಾಯಿತಂದೆಗಳ ನೀತಿಮಟ್ಟ ಸಡಿಲವಾಗಿದ್ದು, ಅವರು

ಸ್ವೇಚ್ಛಾಪ್ರವರ್ತಿಗಳಾಗಿದ್ದರೆ ಮಕ್ಕಳು ಸಹ ಹಿರಿಯರ ಮೇಲ್ಪಂಕ್ತಿಯನ್ನನುಸರಿಸುವರು. ಬಸ್ಸಿನಲ್ಲಿ ಅಥವಾ ಸಿನಿಮಾ ಮಂದಿರದಲ್ಲಿ ಅರ್ಧ ಟಿಕೆಟ್ಟು ಪಡೆಯಲು ತಾಯಿಯು ಹುಡುಗನ ವಯಸ್ಸನ್ನು ಕಡಮೆ ಹೇಳುವಳು ಅಂಗಡಿಯವನು ಚಿಲ್ಲರೆ ವಾಪಸ್ಸು ಕೊಡುವಾಗ ಆಕಸ್ಮಾತ್ ತಪ್ಪಾಗಿ ಹೆಚ್ಚು ಕೊಟ್ಟರೆ, ಹೇಳಬೇಡವೆಂದು ಹುಡುಗನನ್ನು ಸುಮ್ಮನಿರಿಸಿ ಬಿಡುವಳು. ಮನೆ ಬಾಗಿಲಿನಲ್ಲಿ ತರಕಾರಿ ವ್ಯಾಪಾರ ಮಾಡಿದಾಗ ಹುಡುಗನು ಒಂದೆರಡು ಕಾಯಿಗಳನ್ನು ಕಾಣದ ಹಾಗೆ ತಾಯಿ ಕೊಂಡ ತರಕಾರಿಯೆಡೆಗೆ ಸರಿಸಿದರೆ ತಾಯಿಯೂ ಕಂಡೂ ಕಾಣದ ಹಾಗಿದ್ದು ಆಮೇಲೆ "ಹೋಗಲಿ ಬಿಡು" ಎಂದು ಹೇಳಿ ಸುಮ್ಮನಾಗಿ ಬಿಡುವಳು. ಎರಡಾಣೆ ತರಕಾರಿ ಕೊಂಡು ಗಂಡನಿಗೆ ನಾಲ್ಕಾಣೆ ಆಯಿತೆಂದು ಲೆಖ್ಖಹೇಳಿ ಮಿಕ್ಕ ದುಡ್ಡನ್ನು ಸಾಸಿವೆ ಡಬ್ಬದಲ್ಲಿ ಹಾಕಿಡುವಳು. ಈ ಬಗೆಯ ಕೃತ್ಯಗಳು ಮಕ್ಕಳ ಕಣ್ಣ ಮುಂದೆ ಮನೆಯಲ್ಲಿಯೇ ಪ್ರತಿದಿನ ಜರುಗು ತ್ತಿದ್ದರೆ, ಮಕ್ಕಳ ಪ್ರಾಮಾಣಿಕತೆಗೆ ಧಕ್ಕೆ ತಗುಲುವುದರಲ್ಲಿ ಏನೂ ಆಶ್ಚರ್ಯವಿರುವುದಿಲ್ಲ. ಇಂತಹ ಮನೆಗಳಲ್ಲಿ ಬೆಳೆದ ಮಕ್ಕಳ ನಡೆವಳಿಕೆಯಲ್ಲಿ ಯಾವ ಕಟ್ಟು ಕಟ್ಟಳೆಗಳೂ ಇರುವುದಿಲ್ಲ.

ಕಳ್ಳತನ ಮೇಲೆ ತಿಳಿಸಿದ ಸಂದರ್ಭಗಳೆಲ್ಲಕ್ಕೂ ಹೊರತಾದ ಮತ್ತೊಂದು ಬಗೆಯ ಸನ್ನಿವೇಶಗಳಲ್ಲಿ ಪ್ರಚೋದಿಸಲ್ಪಡು ವುದು.

ಒಡನಾಡಿಗಳ ದೃಷ್ಟಿಯಲ್ಲಿ ಒಂದು ಪ್ರತಿಷ್ಠೆ ಮತ್ತು ಘನತೆ ಯನ್ನು ಸಂಪಾದಿಸಿಕೊಳ್ಳಲು ಮಕ್ಕಳು ಕೆಲವು ವೇಳೆ ಕಳ್ಳ ತನದ ದಾರಿಹಿಡಿಯುತ್ತಾರೆ. ಶಾಲೆಯ ಮಕ್ಕಳು ವಿಹಾರ

ಹೊರಟಾಗ ಅಥವಾ ಸಮಾರಂಭ ಏರ್ಪಡಿಸಿದಾಗ ಚಂದಾ ಕೊಡಲು ಮನೆಯಲ್ಲಿ ಒಪ್ಪದಿದ್ದರೆ ಹುಡುಗನು ಕದ್ದಾದರೂ ಹಣಪಡೆಯಲು ಯತ್ನಿಸುವನು. ಒಂದು ಪಕ್ಷ ಉಪಾಧ್ಯಾಯರು, ಸಾಧ್ಯವಾದವರು ಮಾತ್ರ ಚಂದಾಕೊಡಿ ಎಂದು ಹೇಳಿದ್ದರೂ ಕೊಡದೆ ಇದ್ದರೆ ಕೊಟ್ಟ ಹುಡುಗರೆದುರಿಗೆ ತಾನು ಚಿಕ್ಕವನಾಗುತ್ತೇನೆ ಎಂಬ ನಂಬಿಕೆಯಿಂದ ಹುಡುಗನು ಹೇಗಾದರೂ ಹಣ ಒದಗಿಸಲು ಯೋಚಿಸುವನು. ಅಂಗಡಿ ಲೆಖ್ಖ ತೀರಿಸಲು ದುಡ್ಡು ಕೊಟ್ಟು ಕಳುಹಿಸಿದರೆ ಅದರಲ್ಲಿ ಚಂದಾ ಕಟ್ಟಬಹುದು ಒಡನಾಡಿಗಳ ಮನ ಒಲಿಸಿಕೊಳ್ಳಲು ಅವರಿಗೆ ಬರೆಯುವ ಸಾಮಗ್ರಿ, ಕ್ಲಿಪ್ಪುಗಳು, ಚೆಂಡು. ದಾಂಡು, ತಿಂಡಿ ತಿನಿಸು ಮುಂತಾದುವನ್ನು ಮುಫತ್ತಾಗಿ ಹಂಚುವನು. ಕದ್ದು ಸಂಪಾದಿಸಿದ ಹಣದಿಂದ ತನಗೆ ಬೇಡದ ವಸ್ತುಗಳಾಗಿದ್ದರೂ ಇತರರ ಮೆಚ್ಚಿಕೆ ಮತ್ತು ಸ್ನೇಹಗಳಿಸುವುದಕ್ಕಾಗಿ ಕೊಳ್ಳುವನು. ಜಂಭಗಾರನಾದ ಹುಡುಗನು ತನ್ನ ಬಡಾಯಿಯನ್ನು ನಿದರ್ಶಿಸಲು ಕಳ್ಳತನ ಮಾಡಿ ತನ್ನ ಕೀರ್ತಿಯನ್ನು ಶಾಶ್ವತಗೊಳಿಸಲು ಯತ್ನಿಸುವನು. ಒಡನಾಡಿಗಳು ಹಂಗಿಸಿ, ಫಣತೊಟ್ಟರೆ, ಸೋಲಲೊಪ್ಪದೆ ಕಳುವು ಮಾಡಿ ತನ್ನ ಎದೆಗಾರಿಕೆಯನ್ನು ಪ್ರದರ್ಶಿಸುವನು. ಪಕ್ಕದ ಹುಡುಗನ ಹತ್ತಿರ ತನಗಿಂತ ಹೆಚ್ಚು ಸಾಮಾನುಗಳಿವೆಯಲ್ಲ ಎಂಬ ಹೊಟ್ಟೆಉರಿಯಿಂದ ತಾನೂ ಆದಷ್ಟು ಶೇಖರಿಸಲು ಕದಿಯತೊಡಗುವನು.

ಸೇಡುತೀರಿಸಿಕೊಳ್ಳುವ ಮನೋಭಾವ ಕೆಲವು ವೇಳೆ ಕಳ್ಳತನವನ್ನು ಪ್ರಚೋದಿಸುವುದು. ಹಿರಿಯರು ಶಿಕ್ಷೆ ವಿಧಿಸಿದಾಗ ಅವರಿಗೆ ಅತ್ಯಾವಶ್ಯಕವಾದ ಯಾವುದಾದರೂ ಒಂದು ಸಾಮಾನನ್ನು ಅವರಿಂದ ಕದ್ದು ಹುಡುಗನು ಪ್ರತೀಕಾರ ತೋರುವನು.

ಮನೆಗೆ ಹೊತ್ತುಮೀರಿ ಬರುವ ಮಕ್ಕಳು ಮತ್ತು ಆಗಿಂದಾಗ್ಯೆ ಮನೆ ಬಿಟ್ಟು ಓಡಿಹೋಗುವ ಮಕ್ಕಳು ಹಸಿವು ಅಡಗಿಸಿಕೊಳ್ಳಲು ಕದಿಯುವರು.

ಮಕ್ಕಳು ಗುಂಪುಗೂಡಿ ಕಳ್ಳತನಕ್ಕೆ ತೊಡಗುವುದು ಪದಾರ್ಥಗಳ ಆಸೆಗಿಂತಲೂ, ಅವರಿಗೆ ದೊರೆಯುವ ಒಂದು ರೀತಿಯ ಹುರುಪಿಗಾಗಿ ಪತ್ತೆದಾರಿ ಕಥೆಯಲ್ಲಿಯ ಖಳನಾಯಕನ ಮತ್ತು ಸಿನೆಮಾದಲ್ಲಿ ಬರುವ ಸಾಹಸಗಾರನ ಚಟುವಟಿಕೆಗಳು, ದಿನಪತ್ರಿಕೆಯಲ್ಲಿಯ ದರೋಡೆಗಾರನ ದುಷ್ಟತನ— ಇವುಗಳೆಲ್ಲವೂ ಈ ಗುಂಪಿನ ಮಕ್ಕಳಿಗೆ ಪ್ರಶಂಸಾರ್ಹ ಕಾರ್ಯಗಳು ಈ ಕಾರ್ಯರಂಗದಲ್ಲಿ ಹುಡುಗನು ಗಟ್ಟಿಗನಾದಷ್ಟು ಗುಂಪಿನಲ್ಲಿ ಗಣ್ಯವ್ಯಕ್ತಿಯಾಗುತ್ತಾ ಬರುತ್ತಾನೆ.

ಭಾವನಾ ಪ್ರಪಂಚದಲ್ಲಿಯ ಯಾವುದೋ ಒಂದು ಕುಂದಿನಿಂದಾಗಿ ಮಕ್ಕಳು ಕಳ್ಳತನಕ್ಕೆ ಪ್ರೇರೇಪಿಸಲ್ಪಡುವರು. ತಾಯಿ ತಂದೆಗಳ ಮಮತೆಯಿಂದ ವಂಚಿತರಾದ ಮಕ್ಕಳು ತಮಗಾದ ನಷ್ಟ ಭರ್ತಿಮಾಡಲು ಐಹಿಕ ವಸ್ತುಗಳನ್ನು ಯಾವ ರೀತಿಯಲ್ಲಾದರೂ ಆದಷ್ಟು ಶೇಖರಿಸುವರು. ಅವರ ಸುಪ್ತ ಚೇತನವು ಈ ಹವ್ಯಾಸವನ್ನು ಪ್ರಚೋದಿಸುವುದು. ಇದರ ಅರಿವು ಮಕ್ಕಳಿಗಿರುವುದಿಲ್ಲ. ಆದರೆ ಕೆಲವು ಮಕ್ಕಳಿಗೆ ಇದರ ಅರಿವು ಇರುತ್ತದೆ. ಹಿರಿಯರಿಂದ ತಮಗೆ ದೊರೆತ ತಿರಸ್ಕಾರದ ಫಲವಾಗಿ ತಾವು ಕಳ್ಳತನಮಾಡುತ್ತಿರುವುದೆಂದು ಗೊತ್ತಿರುತ್ತದೆ. ಆದುದರಿಂದ ತಳ್ಳತನ ಅಹಿತವಾತಾವರಣಕ್ಕೆ ಮಕ್ಕಳ ಪ್ರತಿಕ್ರಿಯೆಯೆಂದು ತಿಳಿಯಬೇಕು,

ಕಳ್ಳತನದಲ್ಲಿ ತೊಡಗಿದ್ದರೂ ಮಕ್ಕಳನ್ನು "ಕಳ್ಳರೆಂದು" ಕರೆಯುವುದು ತಪ್ಪು. ಕಳ್ಳರು ಸಂಪಾದನೆಗಾಗಿ ಈ ವೃತ್ತಿ

ಯನ್ನು ಅನುಸರಿಸುವರು. ಆದರೆ ಮಕ್ಕಳ ಕಳ್ಳತನಕ್ಕೆ ಕಾರಣಗಳು ಮೇಲೆ ವಿವರಿಸಿದ ಹಾಗೆ ಬೇರೆ ರೀತಿಯವು. ಆದರೂ ನಮ್ಮಲ್ಲಿ ಅವರನ್ನು ಅಪರಾಧಿಗಳೆಂದು ಪರಿಗಣಿಸುವುದು ವಾಡಿಕೆಯಿದೆ. ಈ ಮಕ್ಕಳಿಗೆ ಮದ್ದು, ಶಿಕ್ಷೆಯಲ್ಲ; ಶಿಕ್ಷಣ. ಅವರ ಈ ದುರಭ್ಯಾಸವನ್ನು ತಹಬಂದಿಗೆ ತರುವ ಜವಾಬ್ದಾರಿ ಮಕ್ಕಳ ಮನಸ್ಸನ್ನು ಅರಿತು, ಅವರ ಮನ ಒಲಿಸಿಕೊಳ್ಳುವ ಸಮಾಜ ಸುಧಾರಕರ ಹಾಗೂ ತಾಯಿತಂದೆಗಳ ಕೈಯಲ್ಲಿದೆ.

ಮಕ್ಕಳಲ್ಲಿ ಅವಿಧೇಯತೆ ಒಂದು ರೀತಿಯಲ್ಲಿ ಸಹಜ. ಹಿರಿಯರು ಸಾಮಾನ್ಯವಾಗಿ ಇದನ್ನು ಒಪ್ಪಿಕೊಳ್ಳಲು ಇಷ್ಟಪಡುವುದಿಲ್ಲ. ಅಧಿಕಾರದಲ್ಲಿರುವವರು ಯಾರೇ ಆಗಲಿ ಪೂರ್ಣ ವಿಧೇಯತೆಯನ್ನು ಕೈಕೆಳಗಿನವರಿಂದ ಅಪೇಕ್ಷಿಸುವುದುಂಟು. ತಾಯಿತಂದೆಗಳು ತಮ್ಮ ಮಕ್ಕಳು ತಮಗೆ ವಿಧೇಯರಾಗಿರಬೇಕೆಂದು ಇಚ್ಛಿಸುವುದು ನ್ಯಾಯವಾದುದೇ. ವಿಧೇಯತೆ ಅಥವಾ ಅವಿಧೇಯತೆ ಮಗುವಿಗೆ ಹುಟ್ಟಿದಂದಿನಿಂದಲೇ ಬರುವುದಿಲ್ಲ. ಹಿರಿಯರ ಆಜ್ಞೆ ಮತ್ತು ಕಟ್ಟುಕಟ್ಟಳೆಗಳಿಂದ ಮಕ್ಕಳಲ್ಲಿ ಪ್ರತಿಕ್ರಿಯಾರೂಪದಲ್ಲಿ ವಿಧೇಯತೆ ಅಥವಾ ಅವಿಧೇಯತೆ ಉದ್ಭವಿಸುವುದು. ಆದುದರಿಂದ ಈ ಪ್ರವೃತ್ತಿಯು ಹಿರಿಯರ ಮತ್ತು ಮಗುವಿನ ನಡುವೆ ಇರುವ ಭಾವಬಾಂಧವ್ಯದ ಮೇಲೆ ಹೊಂದಿಕೊಂಡಿರುತ್ತದೆ.

ಮಗು ತೀರ ಚಿಕ್ಕದಾಗಿದ್ದಾಗ ಅದರ ಸ್ನಾನ, ಊಟ, ತಿಂಡಿ, ನಿದ್ರೆಗಳಿಗೆ ಹಿರಿಯರಿಂದ ನೆರವು ದೊರೆಯುವುದು. ತಾಯಿಯು ಸ್ನಾನಮಾಡಿಸಿ ಬಟ್ಟೆ ತೊಡಿಸುತ್ತಾಳೆ; ಊಟ ಮಾಡಿಸಿ, ಹಾಸಿ ಮಲಗಿಸುತ್ತಾಳೆ. ತಂದೆಯು ಎತ್ತಿಕೊಂಡು

ಹೊರಗೆ ಸುತ್ತಾಡಿಸಿಕೊಂಡು ಬರುತ್ತಾನೆ ಸ್ವಲ್ಪ ದೊಡ್ಡದಾದ ಮೇಲೆ ತಾಯಿಯು ಸ್ವತಃ ಊಟಮಾಡಿಸುವುದರ ಬದಲು ಮಗುವನ್ನು ತಟ್ಟೆಯ ಮುಂದೆ ಕೂಡಿಸಿ, ಸ್ವಲ್ಪ ಸ್ವಲ್ಪವಾಗಿ ಚೆಲ್ಲದೆ ತಿನ್ನುವಂತೆ ಹೇಳುತ್ತಾಳೆ. ತಟ್ಟಿ ಮಲಗಿಸುವ ಬದಲು, ಸರಿಯಾಗಿ ಹೊದ್ದಿಕೊಂಡು, ಕಾಲು ನೀಡಿಕೊಂಡು ಮಲಗುವಂತೆ ಹೇಳುತ್ತಾಳೆ. ಮುಖ ತೊಳೆಯುವಾಗ ಚೆನ್ನಾಗಿ ಹಲ್ಲುಜ್ಜಿ, ಕಣ್ಣು ಕಿವಿ ಮೂಗುಗಳನ್ನು ಚೊಕ್ಕಟಮಾಡಿಕೊಳ್ಳುವಂತೆ ಹೇಳುತ್ತಾಳೆ. ಹೀಗೆ ಮಗುವಿನ ನಿತ್ಯಜೀವನದಲ್ಲಿ ನೆರವು ಮೊದಲು ಮುಖ್ಯವಾಗಿ ಕಾರ್ಯರೂಪದಲ್ಲಿ ದೊರೆಯುತ್ತಿದ್ದುದು ಕ್ರಮೇಣ ಸಲಹೆಯ ರೂಪದಲ್ಲಿ ದೊರೆಯುವುದು. ಈ ಸಮಯದಲ್ಲಿ, ಮಕ್ಕಳಲ್ಲಿ ವಿಧೇಯತೆಯನ್ನು ಬಿತ್ತುವುದು ಬಹು ಸುಲಭ. ಏಕೆಂದರೆ ಆಗತಾನೆ ಕಲಿಯುತ್ತಿರುವ ದೈನಂದಿನ ಕ್ರಮಗಳನ್ನು ಸ್ವಯಂ ಮಾಡಿಕೊಳ್ಳಲು ಮಕ್ಕಳಿಗೆ ಬಹಳ ಆನಂದ ಮತ್ತು ಉತ್ಸಾಹ. ಅವರಿಗೆ ಬೇಕಾದ ನೆರವು ಹಿರಿಯರ ಹಿತವಚನ. ಹಿರಿಯರ ನುಡಿಯಂತೆ ನಡೆದಾಗ ಅವರಿಂದ ಸಿಗುವ ಮೆಚ್ಚಿಗೆಯೆಂದರೆ ಒಂದು ಹೆಮ್ಮೆ. ತಾಯಿ ತಂದೆಗಳ ಮಮತೆಯಲ್ಲಿ ಬೆಳೆದ ಮಕ್ಕಳಿಗೆ ಪ್ರತಿಭಟಿಸುವ ಕಾರಣವೇ ಇರುವುದಿಲ್ಲ. ಮೂರರಿಂದ ಐದು ವರ್ಷಗಳವರೆಗೆ ಚಂಡಿತನ ಕಾಣಿಸಿಕೊಂಡರೂ ಹಿರಿಯರ ಪ್ರೀತಿಯ ನೆರಳಿನಲ್ಲಿ ಮಕ್ಕಳು ಕ್ರಮೇಣ ಚಂಡಿತನವನ್ನು ಮರೆತುಬಿಡುತ್ತಾರೆ. ಎಲ್ಲಿ ಶಿಸ್ತು ವಿಶ್ವಾಸರಹಿತವಾಗಿರುತ್ತದೊ ಅಲ್ಲಿ ಮಕ್ಕಳು ತಿರುಗಿ ಬೀಳುತ್ತಾರೆ ಮತ್ತು ವಿಧೇಯರಾಗಿರುವುದಿಲ್ಲ.

ಅವಿಧೇಯ ಮಗುವು ಹಿರಿಯರು ಹೇಳಿದಂತೆ ನಡೆಯದೆ

ಮೌನದಿಂದಿದ್ದು ಅವರ ನಿರ್ಬಂಧನೆಗಳನ್ನು ಬಹಿಷ್ಕರಿಸ ಬಹುದು. ಅಥವಾ "ನಾನು ಮಾಡುವುದಿಲ್ಲ, ನಾನು ಮಾಡುವುದಿಲ್ಲ" ಎಂಬುದಾಗಿ ಬಹಿರಂಗವಾಗಿ ಒತ್ತಿ ಹೇಳಬಹುದು. ಅಥವಾ ಪ್ರತೀಕಾರ ಮನೋಭಾವದಿಂದ ಹೇಳಿದುದಕ್ಕೆ ತದ್ವಿರುದ್ಧವಾಗಿ ನಡೆದುಕೊಳ್ಳಬಹುದು.

ಹಿರಿಯರ ನಡೆನುಡಿ ಅನೇಕ ರೀತಿಯಲ್ಲಿ ಅವಿಧೇಯತೆಯನ್ನು ಕೆರಳಿಸುವುದು.

ಅತಿಯಾದ ಕಟ್ಟುನಿಟ್ಟು—ಕೆಲವು ತಾಯಿತಂದೆಗಳು ಒಂದು ನಿರ್ದಿಷ್ಟ ಕಠಿಣತರ ನೀತಿ ಮಟ್ಟವನ್ನು ತಮ್ಮ ಮಕ್ಕಳಿಂದ ಅಪೇಕ್ಷಿಸುತ್ತಾರೆ. ಅವರು ಸ್ಥಾಪಿಸಿದ ಗಡಿಯಿಂದ ಮಕ್ಕಳು ಸ್ವಲ್ಪ ಅತ್ತಿತ್ತ ಸರಿದರೂ ಮಕ್ಕಳು ಅವಿಧೇಯರಾಗುವರು. ಕೆಲವು ವೇಳೆ ತಾಯಿತಂದೆಗಳು ತಮ್ಮ ತಿರಸ್ಕಾರ ಮನೋಭಾವಕ್ಕೆ ಸಕಾರಣ ಒದಗಿಸಲು ಮಕ್ಕಳಿಗೆ ನಿಲುಕಲಾರದ ನೀತಿ ಮಟ್ಟವನ್ನು ಸ್ಥಾಪಿಸಿ, ವಿಫಲರಾದ ಮಕ್ಕಳನ್ನು ದೂಷಿಸಿ, ತಮ್ಮ ತಿರಸ್ಕಾರವನ್ನು ನ್ಯಾಯ ಸಮ್ಮತವನ್ನಾಗಿ ಮಾಡುತ್ತಾರೆ. ಮತ್ತೆ ಕೆಲವರು ಮುಂದೊದಗಬಹುದಾದ ಆಪತ್ತಿನಿಂದ ಮಕ್ಕಳನ್ನು ರಕ್ಷಿಸಲು ಅತಿಯಾದ ಕಟ್ಟುನಿಟ್ಟನ್ನು ಹಾಕುವರು. ಈ ಬಗೆಯ ಪರಿಸ್ಥಿತಿಗಳಲ್ಲಿ ಭಯದ ಮೂಲಕ ವಿಧೇಯತೆಯನ್ನು ಬಿತ್ತುತ್ತಾರೆ. ಮಕ್ಕಳು ಸಂಪೂರ್ಣವಾಗಿ ತಮ್ಮ ಅಧೀನರಾಗಿರಬೇಕೆಂದು ಈ ಹಿರಿಯರ ಹೆಬ್ಬಯಕೆಯಾಗಿರುತ್ತದೆ. ಇದಕ್ಕೆ ಹೊರತಾಗಿ ನಡೆದುಕೊಂಡರೆ ಅವಿಧೇಯತೆಯಲ್ಲಿ ಪರಿಣಮಿಸುವುದು ವಾಸ್ತವವೇ.

ಅತಿಯಾದ ಸ್ವಾತಂತ್ರ್ಯ—ಕೆಲವರು ಮಕ್ಕಳನ್ನು ಅಂಕೆಯಿಲ್ಲದೆ ಸ್ವೇಚ್ಛೆಯಾಗಿ ಬೆಳೆಸುವುದು ನಾಗರಿಕತೆಯ ಲಕ್ಷಣ

ವೆಂದು ತಿಳಿದಿದ್ದಾರೆ. ಯಾವ ನಿರ್ಬಂಧವೂ ಇಲ್ಲದೆ ಬೆಳೆದ ಮಗುವಿಗೆ ಹಿರಿಯರನ್ನು ಅನುಸರಿಸುವುದು ಅವಶ್ಯವೆಂದು ತಿಳಿಯಲು ಅವಕಾಶವೇ ಇರುವುದಿಲ್ಲ. ಆದರ ಸ್ವೇಚ್ಛಾ ಪ್ರವೃತ್ತಿಯು ಅವಿಧೇಯತೆಗೆ ಕಾರಣವಾಗುವುದು.

ಅನಿರ್ದಿಷ್ಟ ಶಿಸ್ತು—ಹಿರಿಯರ ಕಟ್ಟುಕಟ್ಟಳೆಗಳು ಸ್ವೇಚ್ಛತೆ ಮತ್ತು ನಿರ್ಬಂಧತೆಯ ನಡುವೆ ಡೋಲಾಯಮಾನವಾಗಿರುವ ಸಂದರ್ಭಗಳುಂಟು. ಇದರಿಂದಾಗಿ ಮಗುವಿಗೆ ಯಾವುದು ಸಮ್ಮತ, ಯಾವುದು ಅಸಮ್ಮತವೆಂದು ಅರ್ಥವಾಗುವುದಿಲ್ಲ. ಒಮ್ಮೆ ಕುಪ್ಪಳಿಸಿ ಆಟವಾಡಬಹುದು ಪ್ರಾಯಶಃ ಹಿರಿಯರೂ ಭಾಗವಹಿಸಬಹುದು. ಮತ್ತೊಮ್ಮೆ ಹಾಗೆ ಕುಣಿದಾಡಿದರೆ (ತಂದೆಗೆ ತಲೆನೋವು ಇರುವುದರಿಂದಲೋ ಅಥವಾ ತಾಯಿಗೆ ಆಯಾಸವಾಗಿರುವುದರಿಂದಲೋ) ಶಿಕ್ಷೆಗೆ ಗುರಿಯಾಗುತ್ತದೆ. ಒಮ್ಮೆ ಅಂಗಡಿ ಸಾಮಾನು ತಂದ ಚೂರುಕಾಗದವನ್ನು ಮಗು ಹರಿಯುತ್ತಿದ್ದರೆ ತಾಯಿ ಸುಮ್ಮನಾಗಿ ಬಿಡುವಳು. ಮತ್ತೊಮ್ಮೆ ಮಗು ಅದೇ ಕೆಲಸದಲ್ಲಿ ನಿರತವಾಗಿದ್ದಾಗ (ಅದು ತಂದೆಯು ಓದಿಟ್ಟ ವೃತ್ತಪತ್ರಿಕೆಯಾದುದರಿಂದ) ತಾಯಿಯು ಖಂಡಿಸುತ್ತಾಳೆ. ಒಂದೇ ಬಗೆಯ ಈ ಎರಡು ಸನ್ನಿವೇಶಗಳಲ್ಲಿ ವ್ಯತ್ಯಾಸವೇನೆಂಬುದನ್ನು ಮಗುವು ಗ್ರಹಿಸಲಾರದು ಮತ್ತು ಅದಕ್ಕೆ ತೋರುವ ಹಿರಿಯರ ಅಸಮಂಜಸ ನಡವಳಿಕೆಯಿಂದ ಗೊಂದಲವುಂಟಾಗಿ ಹಿರಿಯರ ಮಾತನ್ನು ಕೇಳದು.

ತಾಯಿತಂದೆಗಳಲ್ಲಿ ಭಿನ್ನಾಭಿಪ್ರಾಯ—ತಾಯಿತಂದೆಗಳಲ್ಲಿ ಒಡಕು ಬಹುವಾಗಿ ಮಕ್ಕಳ ಅವಿಧೇಯತೆಗೆ ಕಾರಣವಾಗುವುದು ತಾಯಿಯು ಊಟದ ಹೊತ್ತಿನಲ್ಲಿ ಚಾಕಲೇಟು ಕೊಡುವುದಿಲ್ಲವೆಂದರೆ, ತಂದೆಯು "ಹೋಗಲಿ, ಒಂದು

ಕೊಟ್ಟುಬಿಡು" ಎಂದು ಹೇಳುವನು ತಾಯಿ ಮತ್ತು ತಂದೆ ಇಬ್ಬರೂ ಮಿಠಾಯಿಗೆ ಕಾಸುಕೊಡುವುದಿಲ್ಲವೆಂದು ಹೇಳಿದಾಗ ಕಾಣದ ಹಾಗೆ ಅಜ್ಜಿಯು ಮಗುವಿಗೆ ಕಾಸುಕೊಡುವಳು. ಈ ಬಗೆಯ ಸನ್ನಿವೇಶಗಳು ಮಗುವಿನಲ್ಲಿ ಅವಿಧೇಯತೆಯನ್ನು ಪ್ರಚೋದಿಸುವುವು. ಇಲ್ಲಿ ಮಗು ಒಂದು ಭಾಗದಲ್ಲಿ ತನ್ನ ಪರವಹಿಸಿದವರಿಗೆ ವಿಧೇಯವಾಗಿಯೂ ಮತ್ತೊಂದು ಭಾಗ ದಲ್ಲಿ ತನಗೆ ವಿರೋಧಿಸಿದವರಿಗೆ ಅವಿಧೇಯವಾಗಿಯೂ ವರ್ತಿ ಸುವುದು.

ಮನೆಯಲ್ಲಿ ತಾಯಿತಂದೆಗಳು ಮಕ್ಕಳ ಮೇಲೆ ನಿರಂಕುಶ ಹತೋಟಿಯನ್ನಿಟ್ಟದ್ದರೆ ಅವಿಧೇಯತೆ ವಿಶೇಷವಾಗಿ ಕಾಣಿಸಿ ಕೊಳ್ಳುವುದು. ಅವರು ವಿಧಿಸುವ ನಿಯಮಗಳು ಸಾಮಾನ್ಯ ವಾಗಿ ವಿವೇಚನಾರಹಿತವಾಗಿರುವುವು ಯಾವ ಮಗುವೇ ಆಗಲಿ ತಂದೆಯು ವೃತ್ತಪತ್ರಿಕೆಯನ್ನು ಓದಿ ಮುಗಿಸುವವರೆಗೂ ಅಥವಾ ತಾಯಿಯು ಪಕ್ಕದ ಮನೆಯಾಕೆಯೊಡನೆ ಮಾತು ಮುಗಿಸುವವರೆಗೂ ಸದ್ದುಮಾಡದೆ ಕುಳಿತಕಡೆ ಕುಳಿತಿರಲಾ ರದು. ಪಕ್ಕದ ಮನೆಯವರು ಸಕ್ಕರೆ ಸಾಲವನ್ನು ತೀರಿಸದಿದ್ದರೆ ತಾಯಿಯು ತಾನು ಕೇಳಲು ಸಂಕೋಚಪಟ್ಟುಕೊಂಡು, ಮಗುವನ್ನು ತೆಗೆದುಕೊಂಡು ಬಾ ಎಂದಾಗ ಮಗುವಿನಿಂದ ವಿಧೇಯತೆಯನ್ನು ನಿರೀಕ್ಷಿಸುವುದು ತಪ್ಪು. ಈ ಬಗೆಯ ಯುಕ್ತವಲ್ಲದ ನಿರ್ಬಂಧನೆಗಳಿಗೆ ಅಸಮಾಧಾನ ತೋರುವುದು ಒಂದು ರೀತಿಯಲ್ಲಿ ಮಗುವಿನ ಹಕ್ಕು ಸಹಜವಾಗಿ ಅಂತಹ ಅಪ್ಪಣೆಗಳು ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ ತಾಯಿತಂದೆ ಗಳಿಂದ ಬರುವುವು. ಖಂಡನೀಯ, ಅಸಮಂಜಸ, ಮತ್ತು ತಾನು ಮಾಡಲಿಷ್ಟವಿಲ್ಲದ ಕೆಲಸಗಳನ್ನು ಮಗುವು ವಿರೋ

ಧಿಸತೊಡಗಿದರೆ, ಕ್ರಮೇಣ ಹಿರಿಯರ ಯಾವ ತರಹದ ಸಲಹೆಗಳಿಗೂ ಮರ್ಯಾದೆ ಕೊಡುವುದಿಲ್ಲ. ಬಲಕಾಯಿಯ ಪೋಷಣೆಯಿಂದ ಬೆಳೆದ ಮಗು ಅಥವಾ ಅಸಂಬದ್ಧ ಮಡಿ ಆಚಾರಗಳ ಮಧ್ಯೆ ಬೆಳೆದ ಮಗು ಹಿರಿಯರ ನುಡಿಗೆ ಇದೇ ರೀತಿ ಎದುರು ಬೀಳಲುಪಕ್ರಮಿಸುವುದು. ಒಮ್ಮೆ ಮಗು ಮನೆಯಲ್ಲಿ ಹಿರಿಯರ ಅಧಿಕಾರವನ್ನು ವಿರೋಧಿಸಿ ತ್ತೆಂದರೆ ಮುಂದೆ ಯಾವ ಬಗೆಯ ಅಧಿಕಾರವನ್ನಾದರೂ ವಿರೋಧಿಸತೊಡಗುವದು. ಇದು ಉಪಾಧ್ಯಾಯರೊಡನೆ ಉದ್ಧಟತನ ಮತ್ತು ಕಾನೂನಿನ ಉಲ್ಲಂಘನೆಯಲ್ಲಿ ಪರಿಣ ಮಿಸುವುದು. ಆದರೆ ಮಕ್ಕಳ ಪೋಷಣೆಯಲ್ಲಿ "ಅಧಿಕಾರ" ತನ್ನದೇ ಆದ ಒಂದು ಸ್ಥಾನವನ್ನು ಹೊಂದಿದೆ. ಮನುಷ್ಯನು ಯಾವ ವೃತ್ತಿಯನ್ನು ಕೈಗೊಂಡರೂ ಸಮರ್ಪಕವಾಗಿ ತನ್ನ ಕೆಲಸವನ್ನು ನೆರವೇರಿಸಬೇಕಾದರೆ ಸಂಬಂಧಪಟ್ಟ ಒಂದು ಅಧಿ ಕಾರ ಮತ್ತು ಕೆಲವು ನಿಬಂಧನೆಗಳನ್ನನುಸರಿಸುವುದು ಆಗತ್ಯ. ಹಾಗೆಯೇ ಮಗುವು ಬೆಳೆದು ವ್ಯಕ್ತಿಯಾಗಬೇಕಾದರೆ ತಾಯಿ ತಂದೆಗಳ ಅಧಿಕಾರ ರೂಪದಲ್ಲಿ ಕೆಲವು ನಿಬಂಧನೆಗಳು ಅತ್ಯ ಗತ್ಯ. ಅಧಿಕಾರ "ಬಲ" ಮತ್ತು "ಶಿಕ್ಷೆ" ಎರಡನ್ನೂ ಒಳಗೊಂಡಿದೆ. ಈ ಅಧಿಕಾರವನ್ನು ಯುಕ್ತಾಯುಕ್ತತೆಯಿಂದ ಉಪಯೋಗಿಸಿದ ಮಗುವು ವಿರುದ್ಧವಾಗಿ ವರ್ತಿಸುವ ಪ್ರಮೇ ಯವೇ ಇರುವುದಿಲ್ಲ ಇಲ್ಲಿ ಒಂದು ಅಂಶವನ್ನು ಗಮನ ದಲ್ಲಿಟ್ಟುಕೊಳ್ಳುವುದು ಆವಶ್ಯಕ. ಹಿರಿಯರ ಅಧಿಕಾರ ಸಮ ರಸವಾಗಿದ್ದರೂ ಮಗು ಪ್ರತಿಭಟಿಸುವ ಸನ್ನಿವೇಶಗಳು ಕೆಲವು ಒದಗಿ ಬರುವುವು. ಅದು ಚಿಕ್ಕದಾಗಿದ್ದಾಗ ಕೇಳಿದ್ದು ದೊರೆಯುವುದು; ಬಯಸಿದ್ದು ನೆರವೇರುವುದು. ಸ್ವಲ್ಪ

ಚ್ಚು ಕಡಿಮೆಯಾದಾಗ ಆದರ ಅಳು ಬಹಳ ಪರಿಣಾಮ ಕಾರಿಯಾಗುವುದು ಆದರೆ ದೊಡ್ಡದಾದ ಹಾಗೆಲ್ಲ ಕ್ರಮೇಣ ತನ್ನ ಹಸುಳೆತನದ ಆಸೆ ಮತ್ತು ಅಭ್ಯಾಸಗಳನು ಬಿಡಬೇಕಾಗುವುದು. ಎಳೆತನದ ಎಷ್ಟೋ ಸುಖ ಸಾಧನ ಗಳನ್ನು ಬಿಟ್ಟುಕೊಡಬೇಕಾಗುವುದು. ಇದು ಮಗು ವಿಗೆ ಕಿರಿಕಿರಿಯನ್ನುಂಟುಮಾಡುವುದು. ತನಗಾಗುವ ಕಿರಿ ಕಿರಿ ಮತ್ತು ನಷ್ಟವನ್ನು ತಪ್ಪಿಸಿಕೊಳ್ಳಲು ಮಗು ಹೋರಾಡು ವುದು ಸಹಜ. ಆದುದರಿಂದ ಅದು ಅವಿಧೇಯತೆಯನ್ನು ವ್ಯಕ್ತ ಪಡಿಸುವುದು ಹಿರಿಯರು ಈ ಸಂದರ್ಭದಲ್ಲಿ ಶಿಕ್ಷೆಯ ಮೂಲಕ ಅವಿಧೇಯತೆಯನ್ನು ತಡೆಗಟ್ಟಿದರೂ ಮಕ್ಕಳಲ್ಲಿ ತಾವು ತಪ್ಪಿತಸ್ಥರೆಂಬ ಶಂಕೆಯನ್ನು ಬಿತ್ತುವರು. ಮಗುವಿಗೆ ಶೈಶವ ದಲ್ಲಿ ಬೇಕಾದುದು ಶಿಸ್ತಿನ ವ್ಯಾಯಾಮವಲ್ಲ; ಪ್ರೀತ್ಯಾದರ ದಿಂದ ಕೂಡಿದ ಮಾರ್ಗದರ್ಶನ.

ಕೆಲವು ಮಕ್ಕಳು ಪರಪೀಡನೆ, ಕ್ರೌರ್ಯ, ಜಗಳಗಂಟಿತನ, ಮತ್ತು ಪದಾರ್ಥಗಳನ್ನು ನಾಶಮಾಡುವುದರಲ್ಲಿ ಯಾವಾಗಲೂ ತೊಡಗಿರುತ್ತಾರೆ. ಮಕ್ಕಳು ಸಾಮಾನಿನ ಒಡೆತನ ಮತ್ತು ಹಕ್ಕುಬಾಧ್ಯತೆಗಳನ್ನು ಅರಿಯುವ ಮೊದಲು ಹೇಗೆ ಕಳ್ಳತನ ಮಾಡಲಾರರೋ ಹಾಗೆಯೇ ಪದಾರ್ಥಗಳ ಬೆಲೆಯನ್ನು (ಅಂದರೆ ನಾಶಮಾಡುವುದರಿಂದಾಗುವ ನಷ್ಟವನ್ನು) ಅರ್ಥ ಮಾಡಿಕೊಳ್ಳುವ ಮೊದಲು ಉದ್ದೇಶಪೂರ್ವಕವಾಗಿ ಹಾಳು ಮಾಡಲಾರರು. ಯಾವ ಯಾವ ಪದಾರ್ಥ ಒಡೆದು ಹೋಗುವುದು, ಯಾವುದು ಮುರಿದು ಹೋಗುವುದು ಎಂಬುದು ಮಕ್ಕಳಿಗೆ ಮೊದಲೇ ಗೊತ್ತಿರುವುದಿಲ್ಲ. ಅದು ಅನುಭವದ ಮೂಲಕ ಕ್ರಮೇಣ ಗೊತ್ತಾಗುವುದು. ಅನೇಕ ವೇಳೆ

ಮಕ್ಕಳ ಅಜಾಗರೂಕತೆ ಪ್ರಾಸಂಗಿಕವಾಗಿರುತ್ತದೆ. ಉದಾ ಹರಣೆಗೆ ಕತ್ತರಿಸಲು ಬರುವುದೆಂದು ತೋರ್ಪಡಿಸಲು ಕೈಗೆ ಸಿಕ್ಕಿದ ಬಟ್ಟೆ ಅಥವಾ ಕಾಗದವನ್ನು ಕತ್ತರಿಸಬಹುದು; ಗುರುತು ನಿಲ್ಲಿಸಬಹುದೆಂದು ತಿಳಿದು ಪುನಃ ಪರೀಕ್ಷೆಮಾಡ ಲೋಸುಗ ಗೋಡೆಯ ಮೇಲೆ ಗೀಚಬಹುದು; ಹೂವನ್ನು ಕಂಡು ತನಗೆ ಬಹಳ ಇಷ್ಟವಾಯಿತೆಂದು ತಿಳಿಯಪಡಿಸಲು ಹೂವನ್ನು ಹಿಸುಕಿ ಒತ್ತಿ ಹಿಡಿಯಬಹುದು; ಅಥವಾ ಬೆಕ್ಕು ಶಬ್ದಮಾಡಲೆಂದು ಅದರ ಬಾಲವನ್ನು ಹಿಡಿದು ಎಳೆಯ ಬಹುದು. ಹೀಗೆ ಮೊದಮೊದಲು ಮಕ್ಕಳ ಅಜಾಗರೂಕತೆ ಕೇವಲ ಸಂದರ್ಭಾನುಸಾರವಾಗಿರುತ್ತದೆ. ಕೆಲವು ಮಕ್ಕಳು ಅಷ್ಟಾಗಿ ಎಚ್ಚರಿಕೆಯುಳ್ಳವರಾಗಿರುವುದಿಲ್ಲ ಮತ್ತು ಅವರಿಗೆ ಕೈ ಭದ್ರವಾಗಿರುವುದಿಲ್ಲ ಬಹು ಬೇಗ ಸಾಮಾನು ಗಳನ್ನು ಎತ್ತಿ ಹಾಕಿಬಿಡುತ್ತಾರೆ. ಈ ರೀತಿಯ ಪ್ರವೃತ್ತಿಯನ್ನು ನಾವು ಹಿರಿಯರು ಕೆಲವರಲ್ಲಿ ಕಾಣಬಹುದು (ಉದಾ. ಕೈಗಡಿಯಾರ ಬೀಳಿಸುವುದು, ಪಾತ್ರೆಗಳನ್ನು ಕೆಳಗೆ ಹಾಕು ವುದು, ಮುಂತಾದುವು). ಕೆಲವು ಮಕ್ಕಳು ಆಟಕ್ಕೆ ಹೋಗುವ ಆತುರದಲ್ಲಿ ತಾವು ತಿಂದ ತಟ್ಟೆ ಬಟ್ಟಲನ್ನು ತೊಳೆಯಲು ಹೋಗಿ ಒಡೆದುಹಾಕಿಬಿಡಬಹುದು ಅಥವಾ ಯಾರು ಬಂದ ರೆಂದು ನೋಡಲು ಓಡಿಹೋಗುವಾಗ ದಾರಿಯಲ್ಲಿರುವ ಸಾಮಾ ನುಗಳನ್ನು ತಗುಲಿಸಿಬಿಡಬಹುದು. ಕೆಲವು ವೇಳೆ ತಮ್ಮ ಕುತೂಹಲವನ್ನು ಪರಿಹರಿಸಲು ಪದಾರ್ಥಗಳನ್ನು ಹಾಳುಮಾ ಡುವುದುಂಟು. ಉದಾಹರಣೆಗೆ, ಬೊಂಬೆಯ ಹೊಟ್ಟೆಯ ಒಳಗೆ ಏನಿದೆ ? ಗಡಿಯಾರ ಏಕೆ ಶಬ್ದಮಾಡುವುದು ಎಂದು ತಿಳಿಯಲಪೇಕ್ಷೆಪಡುವರು. ಪದಾರ್ಥಗಳ ಭಾಗಗಳನ್ನು ಬೇರೆ

ಶೇರೆ ತೆಗೆದು ಪರೀಕ್ಷಿಸಿ ತಮ್ಮ ಕುತೂಹಲವನ್ನು ತೃಪ್ತಿಪಡಿಸ
ತ್ನಿಸುವರು ಮತ್ತೆ ಕೆಲವು ಮಕ್ಕಳು ಅದರಲ್ಲೂ ಬಹುವಾಗಿ
ಕ್ಷೆಗೆ ಗುರಿಯಾದ ಮಕ್ಕಳು ಆಟವಾಡುವಾಗ ಬೊಂಬೆಯ
ನ್ನಾಗಲೀ ಅಥವಾ ಕುರ್ಚಿ ಮೇಜಗಳನ್ನಾಗಲೀ ಕಾಲ್ಪನಿಕ
ಕ್ತಿಗಳನ್ನಾಗಿ ಮಾರ್ಪಡಿಸಿ ಅವುಗಳನ್ನು ಹೊಡೆದು ಮುರಿ
ಯುವುದುಂಟು ಇಲ್ಲಿ, ಹಿರಿಯರು ಯಾವ ರೀತಿ ಶಿಸ್ತು
ಾಲಿಸುತ್ತಾರೋ ಅದನ್ನು ತಾವೂ ಅನುಕರಿಸುವರು. ಅಂದರೆ
ಾಮಾನನ್ನು ನಾಶಗೊಳಿಸಬೇಕೆಂಬುದು ಅವರ ಉದ್ದೇಶವಲ್ಲ
ದರೆ ಬುದ್ಧಿ ತಿಳಿದ ಮಕ್ಕಳು ಉದ್ದೇಶಪೂರ್ವಕವಾಗಿ ಮೇಲೆ
ಳಿಸಿದ ನಿರ್ನಾಮ ಕಾರ್ಯದಲ್ಲಿ ತೊಡಗಿದರೆ ಅದು ಬೇರೆ
ೂಪ ತಾಳುವುದು. ಒಡಹುಟ್ಟಿದವರಲ್ಲಿ ಅಸೂಯೆ ಮತ್ತು
ರ್ಧೆ; ಮತ್ತು ತಾಯಿತಂದೆಗಳ ದಬ್ಬಾಳಿಕೆ ಇವು ಮಕ್ಕಳು,
ಳ್ಳೆಯ ಮಾರ್ಗವನ್ನು ಬಿಟ್ಟು ದುರ್ಮಾರ್ಗಕ್ಕೆ ಕಾಲಿಡುವಂತೆ
ಾಡುವುವು. ಈ ಪರಿಸ್ಥಿತಿಗಳಲ್ಲಿ ಮಕ್ಕಳು ಉದ್ರಿಕ್ತರಾದ
ಕ್ಷಣವೇ ಪದಾರ್ಥಗಳನ್ನು ಎಲ್ಲರೆದುರಿಗೆ ಒಡೆಯುವುದಿಲ್ಲ.
ುಟ್ಟಾಗಿ ಈ ಕಾರ್ಯದಲ್ಲಿ ತೊಡಗಿ ಸೇಡು ತೀರಿಸಿಕೊಳ್ಳು
ತ್ತಾರೆ

ಮೇಲೆ ಬೀಳುವ ಪ್ರವೃತ್ತಿಯು ಮಕ್ಕಳಲ್ಲಿ ನಾನಾ ಕಾರಣ
ಳಿಂದಾಗಿ ಕಂಡುಬರುವುದು. ಮಕ್ಕಳು ಆಕ್ರಮಣ ಅಥವಾ
ಮೇಲೆ ಬೀಳುವ ಪ್ರವೃತ್ತಿಯನ್ನು ತಮ್ಮ ಇಚ್ಛೆ ಪೂರೈಸಿಕೊ
ಲು ಒಂದು ಸಾಧನವನ್ನಾಗಿ ಉಪಯೋಗಿಸಿಕೊಳ್ಳಬಹುದು.
ಥವಾ ಈ ಒಂದು ಅಭ್ಯಾಸದ ಮೂಲಕ ತೊಂದರೆ, ಯಾತನೆ,
ುತ್ತು ಭಗ್ನಕ್ಕೆ ಕಾರಣಭೂತರಾದ ವ್ಯಕ್ತಿಗಳನ್ನಾಗಲೀ ಅಥವಾ
ದಾರ್ಥಗಳನ್ನಾಗಲೀ ತೊಡೆದುಹಾಕಲು ಪ್ರಯತ್ನಿಸಬಹುದು

ಈ ಒಂದು ದೃಷ್ಟಿಯಲ್ಲಿ ಮಕ್ಕಳು ನಿರ್ಣಾಮ ಮತ್ತು ದ್ವೇಷ ಮನೋಭಾವವನ್ನು ಬೆಳೆಸಿಕೊಂಡು ಬರುತ್ತಾರೆ. ಬಹುವಾಗಿ ಆಶಾಭಂಗ ಅಥವಾ ಭಗ್ನತೆಯು ಮೇಲೆ ಬೀಳುವ ಪ್ರವೃತ್ತಿಯನ್ನು ಮಕ್ಕಳಲ್ಲಿ ಕೆರೆಳಿಸುವುದು. ಭಗ್ನತೆಯು ಹಾನಿ ಮತ್ತು ತೀರದ ಬಯಕೆಯಿಂದುಂಟಾಗಬಹುದು, ಅಥವಾ ತನ್ನ ಕೆಲಸ ಕಾರ್ಯಗಳಿಗೆ ಅಡ್ಡಿ ಅಥವಾ ಕಟ್ಟುಕಟ್ಟಳೆಗಳಿಂದುಂಟಾಗಬಹುದು, ಅಥವಾ ಹೊರಗಡೆಯಿಂದ ಬರುವ ಬೆದರಿಕೆ ಮತ್ತು ಕಿರಿಕಿರಿಯಿಂದಾಗಿ ಮಕ್ಕಳು ಭಗ್ನತೆಯನ್ನನುಭವಿಸಬಹುದು. ಮತ್ತೆ ಕೆಲವು ಸಂದರ್ಭಗಳಲ್ಲಿ 'ಭರವಸೆ' ಯಿಂದ ವಂಚಿತರಾದ ಮಕ್ಕಳು ಭಗ್ನಹೃದಯಿಗಳಾಗುತ್ತಾರೆ. ಆದುದರಿಂದ ಹೆಚ್ಚಾಗಿ ತಿರಸ್ಕೃತರಾದ ಮಕ್ಕಳು ಮೇಲೆ ಬೀಳುವ ಪ್ರವೃತ್ತಿಯುಳ್ಳವ ರಾಗುತ್ತಾರೆ. ನೀಚಭಾವ ಮತ್ತು ತನ್ನಲ್ಲಿರುವ ಕೊರತೆ ಗಳಿಂದಾಗಿ ಮಕ್ಕಳು ಮೇಲೆ ಬೀಳುವ ಪ್ರವೃತ್ತಿಯುಳ್ಳವ ರಾಗಬಹುದು. ತನ್ನ ನ್ಯೂನತೆಗಳನ್ನು ತನ್ನಿಂದ ಮತ್ತು ಇತರರಿಂದ ಮರೆಮಾಚಲು ಮಕ್ಕಳು ಅಬ್ಬರಿಸಿ ದಿಟ್ಟತನವನ್ನು ಪ್ರದರ್ಶಿಸಬಹುದು.

ಸದ್ಯದ ಪರಿಸ್ಥಿತಿಯಲ್ಲಿ ಆಕ್ರಮಣ ಮನೋಭಾವದಿಂದ ಹಿರಿಯರ ಮೇಲೆ ಬೀಳುವ ಪ್ರವೃತ್ತಿಯನ್ನು ಹೊಂದಿದ್ದರೆ ದೊಡ್ಡ ಅಪರಾಧವೆನಿಸುವುದು ಸಹಜ. ಹಿರಿಯರು ಆದಷ್ಟು ಮಕ್ಕಳು ಬೆಳೆಯುವ ವಾತಾವರಣದಲ್ಲಿ ಅಡ್ಡಿ ಅಡಚಣೆಗಳು ಒದಗದಂತೆ ಎಚ್ಚರಿಕೆ ಕ್ರಮ ತೆಗೆದುಕೊಳ್ಳಬೇಕು. ಅವರಿಗೆ "ಭರವಸೆ" ಯನ್ನು ನೀಡಬೇಕು ಪದೇ ಪದೇ ಮಕ್ಕಳಿಗೆ ಆಶಾಭಂಗವಾಗುವುದರಿಂದ ಅವರು ದುಷ್ಟತನಕ್ಕೆ ತೊಡಗುವುದು ಸ್ವಾಭಾವಿಕ. ಆದುದರಿಂದ ಮಕ್ಕಳು ಬಯಲಿನಲ್ಲಿ

..ಣಿದು ಕುಪ್ಪಳಿಸಿ ಆಡಲು ಅವಕಾಶಮಾಡಿಕೊಡಬೇಕು. ಹಾಗೆ ಆಡುವಾಗ ಮಕ್ಕಳಲ್ಲಿ ಒಂದು ಮಿತಿಯಲ್ಲಿ ಘರ್ಷಣೆಯಾ ..ರೆ, ಜಗಳವಾದರೆ, ತಾಯಿತಂದೆಗಳು ಅಷ್ಟೇನು ಯೋಚಿಸ ..ೇಕಾಗಿಲ್ಲ. ಏಕೆಂದರೆ ಆ ಮೂಲಕ ಮಕ್ಕಳು ತಮ್ಮಲ್ಲಿ ಹುದು ..ಸಿಟ್ಟ ಆಕ್ರಮಣ ಮತ್ತು ಮೇಲೆ ಬೀಳುವ ಪ್ರವೃತ್ತಿಯನ್ನು ..ೊರಚೆಲ್ಲಿ ನಿರಾತಂಕರಾಗುತ್ತಾರೆ ಆದರೆ ಈ ಪ್ರವೃತ್ತಿಗಳನ್ನು ..ಂಪೂರ್ಣವಾಗಿ ತಡೆಗಟ್ಟುವುದು ಸಾಧ್ಯವಿಲ್ಲ. ಏಕೆಂದರೆ ಈ ..ಪ್ರವೃತ್ತಿಗಳ ಮೂಲಕಾರಣವಾದ ಆಶಾಭಂಗ ಒಂದಲ್ಲ ಒಂದು ..ೀತಿಯಲ್ಲಿ ಎಲ್ಲರಿಗೂ ಸಂಭವಿಸುವುದು ಖಂಡಿತ. ಆದರೆ ಈ ಪ್ರವೃತ್ತಿಯನ್ನು ರಚನಾತ್ಮಕವಾಗಿ ಪರಿವರ್ತಿಸಬಹುದು. ಮೇಲೆ ..ೀಳುವ ಅಥವಾ ಆಕ್ರಮಣ ಬಲವನ್ನು ಸಂಯಮ, ಸಾತ್ವಿಕಲೆ, ..ುತ್ತು ಸಾಧನೆಗೆ ಉಪಯೋಗಿಸಲು ಸಾಧ್ಯವಿದೆ. ಅದೇ ..ೈತನ್ಯವನ್ನು ವಿಹಿತ ರೀತಿಯಲ್ಲಿ ಅಳವಡಿಸಿಕೊಂಡರೆ ಕಲೆ ..ುತ್ತು ಕೈಗಾರಿಕೆಯಲ್ಲಿ ಯಶಸ್ವಿಯಾಗುವ ಸಂಭವವಿದೆ. ..ುಕ್ಕಳು ದೊಡ್ಡವರಾದ ಹಾಗೆಲ್ಲ ಹಿರಿಯರ ಆಶ್ರಯದಿಂದ ..ಿಡುಗಡೆಹೊಂದಲು ಮೇಲೆ ಬೀಳುವ ಪ್ರವೃತ್ತಿ ತನ್ನದೇ ಆದ ..ಂದು ರೀತಿಯಲ್ಲಿ ಸಹಾಯಕಾರಿಯಾಗುವುದು. ಒಟ್ಟಿನಲ್ಲಿ ..ೀಗೆ ಅನೇಕ ರೀತಿಯಲ್ಲಿ ಆಕ್ರಮಣ ಅಥವಾ ಮೇಲೆಬೀಳುವ ..ಸ್ವಭಾವಕ್ಕೆ ರಚನಾತ್ಮಕ ರೂಪ ತರಬೇಕಾದರೆ ಶಿಕ್ಷಣ ಮತ್ತು ..ುದ್ಧಿ ಸಂಸ್ಕಾರ ಅತ್ಯಾವಶ್ಯಕ.

ಕ್ರೌರ್ಯ ಮತ್ತು ಪರಪೀಡನೆ ಸ್ವಲ್ಪ ಜಟಿಲವಾದ ಸಮಸ್ಯೆ. ..ುದ್ರೇಕದ ಪ್ರಭಾವದಿಂದ ಮಕ್ಕಳು ಕ್ರೌರ್ಯ ಮತ್ತು ಪರ ..ೀಡನೆಗೆ ಕೈಹಾಕಿದರೇ? ಅಥವಾ ಮೊದಲೇ ಯೋಚಿಸಿ ತಮ್ಮ ..ಾರ್ಯದ ಮತ್ತು ಅದರ ಪರಿಣಾಮದ ಸಲುವಾಗಿ ತಮಗೆ

ಆಗುವ ಸುಖಾನುಭವಕ್ಕಾಗಿ ಕೈಹಾಕಿದರೇ ? ಎಂಬ ಅಂಶ ಗಮನಿಸತಕ್ಕದ್ದು. ತಾವು ದ್ವೇಷಿಸುವ ಮತ್ತು ಕರಬುವ ವ್ಯಕ್ತಿಗೆ ಸೇರಿದ ಪದಾರ್ಥಗಳನ್ನು ನಾಶಗೊಳಿಸಿ ಆ ಮೂಲಕ ತೃಪ್ತಿಹೊಂದುವರೇ ? ಅಥವಾ ತಮಗೆ ಏನೊಂದು ಅಪರಾಧ ಎಸಗದ ವ್ಯಕ್ತಿಗಳನ್ನಾಗಲೀ, ಪ್ರಾಣಿಗಳನ್ನಾಗಲೀ ಬೆನ್ನಟ್ಟಿ ಹೋಗಿ ಹಿಂಸಿಸುವರೇ ಎಂಬ ಅಂಶಕೂಡ ಗಮನಾರ್ಹ ವಾದುದು. ಕೋಪಗೊಂಡ, ಅಸೂಯಾಪರರಾದ, ಅಥವಾ ಸೇಡಿರುವ ಮಕ್ಕಳು ಯಾವುದಾದರೂ ನಿರ್ದಿಷ್ಟ ಸನ್ನಿವೇಶಕ್ಕೆ ಮಾತ್ರ ದೌರ್ಜನ್ಯ ತೋರುತ್ತಾರೆ. ಆದರೆ ಕ್ರೌರ್ಯ ಮತ್ತು ಪರಪೀಡನೆಯ ಹವ್ಯಾಸವಿರುವ ಮಕ್ಕಳಿಗೆ ಯಾವ ನಿರ್ದಿಷ್ಟ ಪ್ರಚೋದನೆಯ ಅವಶ್ಯಕತೆಯೂ ಇಲ್ಲ. ಇತರರು ಸಂಕಟ ಪಡುವುದನ್ನು ನೋಡಿ ತಾವು ಸುಖಪಡುವರು. ಅವರಿಗೆ ಕರುಣೆ ಅನ್ನುವುದು ಕಿಂಚಿತ್ತಾದರೂ ಇರುವುದಿಲ್ಲ. ಈ ಗುಂಪಿಗೆ ಸೇರಿದ ಮಕ್ಕಳ ಜೀವನವನ್ನು ಪರಿಶೀಲಿಸಿದ್ದಲ್ಲಿ, ಇನ್ನೊಬ್ಬರ ಆಸೆ ಅಭಿಲಾಷೆ, ಕಷ್ಟಸುಖಗಳಲ್ಲಿ ನಿರ್ಲಕ್ಷ್ಯ ಮನೋಭಾವವು ಅವರ ತಾಯಿತಂದೆಗಳಲ್ಲಿ ಕಂಡುಬರುವುದು. ಅನೇಕ ವೇಳೆ ಹಿರಿಯರ ನಿರ್ಲಕ್ಷ್ಯಕ್ಕೆ ಮಕ್ಕಳೇ ತುತ್ತಾ ಗಿರುತ್ತಾರೆ. ಜೊತೆಗೆ ಮಕ್ಕಳ ಶಿಸ್ತನ್ನು ಪರಿಪಾಲಿಸುವ ನೆಪದಲ್ಲಿ ಹಿಂಸಾತ್ಮಕ ಶಿಕ್ಷೆಯನ್ನು ಬಳಸುವರು. ಹಿರಿಯರು ತಮ್ಮ ನಡೆ ನುಡಿಗಳಲ್ಲಿ ಮೇಲ್ಪಂಕ್ತಿ ಹಾಕಿ ಕ್ರೌರ್ಯ ಮತ್ತು ಪರಪೀಡನೆ ಮಾನವೀಯತೆಯ ಕುರುಹಲ್ಲವೆಂಬುದನ್ನು ಮಕ್ಕಳಿಗೆ ತಿಳಿಯ ಪಡಿಸಬೇಕು. ಮತ್ತು ತಮ್ಮ ಶಿಕ್ಷಾರೀತಿಯಲ್ಲಿ ದೌರ್ಜನ್ಯದ ಸುಳಿವೇ ಇರದಂತೆ ಎಚ್ಚರಿಕೆ ತೆಗೆದುಕೊಳ್ಳುವುದು ಅತ್ಯಾ ವಶ್ಯಕ.

ಶಾಲೆಗೆ ತಪ್ಪಿಸಿಕೊಳ್ಳುವ ಮತ್ತು ಓಡಿಹೋಗುವ ಚಾಳಿ ಮಕ್ಕಳ ವಿನಾಶಕ್ಕೆ ಮೂಲ. ನಾನಾಕಾರಣಗಳಿಂದಾಗಿ ಮಕ್ಕಳು ಶಾಲೆಗೆ ತಪ್ಪಿಸಿಕೊಳ್ಳುತ್ತಾರೆ.

ಶಾಲೆಯ ಪಾಠಪ್ರವಚನಗಳಲ್ಲಿ ಅಭಿರುಚಿ ಇಲ್ಲದಿರುವುದೂ ಒಂದು ಕಾರಣ. ಶಾಲೆಯ ಪಾಠಪ್ರವಚನಗಳಲ್ಲಿ ಅವಶ್ಯಕವಾದ ಬುದ್ಧಿಮಟ್ಟ ಮಕ್ಕಳಿಗೆ ಇಲ್ಲದೆ ಇರಬಹುದು. ಇದರಿಂದಾಗಿ ಮಕ್ಕಳು ಪಾಠಕಲಿಯಲು ಅಸಮರ್ಥರಾಗುವರು. ಇದರ ಪರಿಣಾಮ ಶಾಲೆ ಮತ್ತು ಮನೆಗಳಲ್ಲಿ ಮಕ್ಕಳಿಗೆ ಶಿಕ್ಷೆ ಮತ್ತು ಅವಹೇಳನ. ಈ ಪರಿಸ್ಥಿತಿಯಿಂದ ಪಾರಾಗಲ್ಲ. ಸುಲಭೋಪಾಯ ಶಾಲೆಗೆ ತಪ್ಪಿಸಿಕೊಳ್ಳುವುದೆಂಬುದನ್ನು ಬಹು ಬೇಗ ಕಂಡುಕೊಳ್ಳುತ್ತಾರೆ. ಕೆಲವು ವೇಳೆ ಮಕ್ಕಳು ಅತ್ಯಂತ ಸೂಟಿಯಾಗಿರುವುದೂ ಉಂಟು. ಅಂತಹ ಸಂದರ್ಭದಲ್ಲಿ ಶಾಲೆಯ ಸುಲಭಪಾಠಗಳು ಮಕ್ಕಳಿಗೆ ಬೇಸರವನ್ನುಂಟು ಮಾಡುವುದು ಒಮ್ಮೊಮ್ಮೆ ತಪ್ಪಿಸಿಕೊಳ್ಳುವುದರಿಂದ ಅಷ್ಟಾಗಿ ಜ್ಞಾನಾರ್ಜನೆಗೆ ಅಡಚಣೆಯಾಗುವುದಿಲ್ಲವೆಂದು ಭಾವಿಸಿ ಶಾಲೆಗೆ ಹೋಗದೇ ಇರಬಹುದು

ಹೆಚ್ಚು ಜನರಿರುವ ಮನೆಯಲ್ಲಿ ಕಾಲಕ್ಕೆ ಸರಿಯಾಗಿ ಶಾಲೆಗೆ ಹೋಗಲು ಕಷ್ಟವಾಗಬಹುದು. ಕಾಲಪ್ರವೃತ್ತಿ, ಸ್ನಾನ, ಕಾಫಿ ತಿಂಡಿಗಳಲ್ಲಿ ಒಬ್ಬರನ್ನೊಬ್ಬರು ಅನುಸರಿಸದಿದ್ದರೆ ಮನೆಯಿಂದ ಹೊರಡುವುದೇ ತಡವಾಗುವುದು. ಪ್ರತಿದಿನ ಹೊತ್ತು ಮೀರಿ ತರಗತಿಗೆ ಹೋಗಲಂಜಿ ಶಾಲೆಗೆ ಹೋಗದೆ ಇದ್ದು ಬಿಡುವರು. ಮೊದಲಲ್ಲಿ ಈ ರೀತಿ ಶುರುವಾದರೂ, ಕ್ರಮೇಣ ಇತರ ಕಾರಣಗಳಿಂದ ಮಕ್ಕಳು ತಾವಾಗಿ ಶಾಲೆಗೆ ತಪ್ಪಿಸಿಕೊಳ್ಳುತ್ತಾರೆ.

ಕೆಲವು ವೇಳೆ ಮಕ್ಕಳು ಸಹಪಾಠಿಯ ಪ್ರೇರಣೆಯಿಂದ ಅಥವಾ ಅವರ ನಿದರ್ಶನವನ್ನನುಸರಿಸಿ ತಾವೂ ಶಾಲೆಗೆ ತಪ್ಪಿಸಿ ಕೊಳ್ಳುವುದುಂಟು. ಇತರರ ಪ್ರೇರಣೆ ಇಂತಹ ಕೆಲಸಗಳಲ್ಲಿ ಬಹಳ ಫಲಕಾರಿಯಾದುದು. ಪ್ರೇರಣೆಗಳಿಗೊಳಗಾಗದಿದ್ದರೆ ತಮ್ಮನ್ನು ನಾನಾಬಗೆಯಾಗಿ ಹೀಯಾಳಿಸಿ ಹಾಸ್ಯಮಾಡಿ, ಅಲ್ಲಗಳೆಯುವುದು ಖಂಡಿತವಾದುದರಿಂದ ಒಳ್ಳೆಯ ಮಕ್ಕಳೂ ಅಡ್ಡದಾರಿ ಹಿಡಿಯಬೇಕಾಗಬಹುದು.

ಕೆಲವು ತಾಯಿತಂದೆಗಳು ಉದ್ದೇಶರಹಿತವಾಗಿ ಶಾಲೆಗೆ ತಪ್ಪಿಸಿಕೊಳ್ಳುವ ಅಭ್ಯಾಸವನ್ನು ಮಕ್ಕಳಲ್ಲಿ ಬಿತ್ತುತ್ತಾರೆ. ಮನೆಗೆ ನೆಂಟರಿಷ್ಟರು ಬರುವುದಿದ್ದರೆ, ಅವರು ಬಂದ ಸಮಯ ದಲ್ಲಿ ಅಂಗಡಿಯಿಂದ ಸಾಮಾನುತರುವುದಕ್ಕಾಗಿಯೋ, ಮನೆ ಯಲ್ಲಿ ಸುಣ್ಣಹೊಡಿಸುವಾಗ ಆಳುಗಳಮೇಲೆ ನಿಗಾ ಇರಿಸುವು ದಕ್ಕಾಗಿಯೋ, ಅಥವಾ ಸೋಂಕುಜಾಡ್ಯಕ್ಕೆ ಮಕ್ಕಳು ಈಡಾ ಗುತ್ತಾರೆಂದೋ, ಕಳ್ಳರು ಮಕ್ಕಳನ್ನು ಅಪಹರಿಸುತ್ತಾರೆಂದೋ ಮಕ್ಕಳನ್ನು ಮನೆಯಲ್ಲಿಯೇ ನಿಲ್ಲಿಸಿಕೊಂಡುಬಿಡುತ್ತಾರೆ. ಸ್ವತಃ ಅವಿದ್ಯಾವಂತರಾದ ತಾಯಿತಂದೆಗಳು ತಮ್ಮ ಅನುಕೂಲಗಳಿ ಗಾಗಿ ಮಕ್ಕಳನ್ನು ಶಾಲೆಗೆ ಕಳುಹಿಸುವುದರಲ್ಲಿ ಅಷ್ಟು ಕಟ್ಟು ನಿಟ್ಟಾಗಿರುವುದಿಲ್ಲ. ವಿದ್ಯಾವಂತರಾದ ಮತ್ತು ತಿಳಿವಳಿಕೆ ಯಿರುವ ಹಿರಿಯರು ಅನೇಕವೇಳೆ ಮಕ್ಕಳಿಗೆ ಹಾಜರಿ ಸಾಲದೆ ಬಂದಲ್ಲಿ, ಒಪ್ಪಬಹುದಾದ ಕಾರಣಗಳನ್ನು ತೋರಿಸಿ ಉಪಾಧ್ಯಾಯರಿಗೆ ಕಾಗದ ಬರೆದು, ಮಕ್ಕಳ ನೆರವಿಗೆ ಬರುತ್ತಾರೆ. ಈ ಬಗೆಯ ಹಿರಿಯರ ನಡವಳಿಕೆಗಳಿಂದ ಮಕ್ಕಳು ನಿರಾಯಾಸವಾಗಿ ಸ್ವಲ್ಪವೂ ಹಿಂಜರಿಯದೆ ಶಾಲೆ ಗಳ್ಳರಾಗುತ್ತಾರೆ

ಸಾಹಸ ಮತ್ತು ಕುತೂಹಲ ಕೆಲವು ಸಂದರ್ಭಗಳಲ್ಲಿ ಶಾಲೆ ತಪ್ಪಿಸಿಕೊಳ್ಳುವುದಕ್ಕೆ ಹಿನ್ನೆಲೆಯಾಗಿರುತ್ತದೆ. ಕೆಲವು ಮಕ್ಕಳು ಬೇಸರ ಹಿಡಿಸುವ ಮತ್ತು ಯಾವ ಬಗೆಯ ಏರಿಳಿತಗಳಿಲ್ಲದ ಬಾಳಿಗೆ ತುತ್ತಾಗಿರುತ್ತಾರೆ. ಅಂಥವರಿಗೆ ಬೀದಿಯಲ್ಲಿ, ಅಂಗಡಿ ಸಾಲುಗಳಲ್ಲಿ, ರಸ್ತೆಯ ಚೌಕದಲ್ಲಿ ಅನೇಕ ಆಕರ್ಷಣೆಗಳಿರುತ್ತವೆ. ಈ ಆಕರ್ಷಣೆಗಳೆದುರು ಶಿಕ್ಷೆಯ ಭಯ ಅವರಿಗೆ ತೃಣಸಮಾನ. ಕಲ್ಪನಾಶಕ್ತಿಯಿರುವ ಮಕ್ಕಳು ತಮ್ಮ ಅಲೆದಾಟವನ್ನು ಸಾಹಸ ಕೃತ್ಯಗಳಿಗೆ ಹೋಲಿಸಿ ಆ ಮೂಲಕ ಸ್ವಪ್ರತಿಷ್ಠೆಯನ್ನನುಭವಿಸುವರು.

ಶಾಲೆಗಳ್ಳತನ ವ್ಯಾಸಂಗ ದೃಷ್ಟಿಯಿಂದ ಹಾನಿಕರವಾದುದಲ್ಲದೆ ಬೇರೆ ದುಶ್ಚಟಗಳಿಗೆ ಸಹ ಎಡೆಕೊಡುವುದು. ಸಿಕ್ಕಿಬಿದ್ದಾಗ ತಪ್ಪಿಸಿಕೊಳ್ಳುವುದಕ್ಕಾಗಿ ಮಕ್ಕಳು ಸುಳ್ಳಿನ ಮರೆ ಹೋಗುತ್ತಾರೆ. ತಮ್ಮ ಅಲೆದಾಟದಲ್ಲಿ ಹಸುವನ್ನು ಇಂಗಿಸಿಕೊಳ್ಳಲು ತಿಂಡಿ ಪದಾರ್ಥಗಳನ್ನು ಅಂಗಡಿಯಿಂದ ಕದಿಯತೊಡಗುವರು. ಕಾಲಹರಣ ಮಾಡಲು ಸಿನಿಮಾ ಮಂದಿರಗಳಿಗೆ ಕಳ್ಳತನದಲ್ಲಿ ನುಸುಳತೊಡಗುವರು. ಕೆಟ್ಟ ಸಹವಾಸಕ್ಕೆ ಬೀಳುವುದು ಅಸಂಭವವಲ್ಲ. ಸಹವಾಸ ದೋಷದಿಂದ ಎಲ್ಲಾ ತರಹದ ದುಶ್ಚಟಗಳಿಗೂ ಬಲಿಯಾಗುವರು.

ಶಾಲೆಗಳ್ಳತನದ ನಿವಾರಣೋಪಾಯ ಆಯಾ ಸಂದರ್ಭಕ್ಕನುಗುಣವಾಗಿರಬೇಕು. ಅಂದರೆ ಶಾಲೆಗಳ್ಳತನಕ್ಕೆ ಕಾರಣವನ್ನು ಕಂಡುಹಿಡಿದು ಸೂಕ್ತಕ್ರಮ ತೆಗೆದುಕೊಳ್ಳಬೇಕು. ಮಕ್ಕಳ ಆರೋಗ್ಯ ದೃಷ್ಟಿ, ಬುದ್ಧಿಮಟ್ಟ ಮೊದಲಾದ ಅಂಶಗಳನ್ನು ಮೊದಲು ಪರಿಶೀಲಿಸಬೇಕು. ಶಾಲೆಯ ವಾತಾವರಣ ಪ್ರಿಯವಾಗುವಂತೆ ಮಾಡುವುದು ಉಪಾಧ್ಯಾಯರ ಕೈಯಲ್ಲಿದೆ

ಅವರು ಸ್ನೇಹಪರರಾದರೆ, ವಿಶ್ವಾಸಿಗಳಾದರೆ, ಸಹಾನುಭೂತಿ ತೋರಿದರೆ ಮಕ್ಕಳು ಸನ್ಮಾರ್ಗಿಗಳಾಗುವುದುಂಟು. ಶಾಲೆ ಮತ್ತು ವ್ಯಾಸಂಗವೆಂದರೆ ಮಕ್ಕಳಿಗೆ ಮಮತೆಯುಂಟಾಗಲು ಉಪಾಧ್ಯಾಯರು ಎಷ್ಟೋ ಸಹಾಯಕರಾಗಬಹುದು. ಆಟ, ವ್ಯಾಯಾಮ, ಸಮಾರಂಭ, ಮತ್ತು ಪ್ರವಾಸ ಶಾಲೆಯ ಕಾರ್ಯಕ್ರಮದ ಅಂಗಗಳಾಗಿದ್ದರೆ ಮಕ್ಕಳಿಗೆ ಉತ್ಸಾಹ ಒದಗಿಸಿದಂತಾಗುವುದು. ತಾಯಿತಂದೆಗಳ ನಡವಳಿಕೆಯಲ್ಲಿ ತಿದ್ದುಪಡಿಯಾಗುವುದು ಅವಶ್ಯ. ಕೆಲವು ಮಕ್ಕಳು ಶಾಲೆಯೆಂದರೆ ಯಾವ ಅಸಮಾಧಾನವಿಲ್ಲದಿದ್ದರೂ ಶಾಲೆಗೆ ಹೋಗಲು ಹಿಂಜರಿಯುವರು. ಶಾಲೆಯಲ್ಲಿರುವವರೆಗೂ ಒಂದು ಬಗೆಯ ಕಳವಳವನ್ನನುಭವಿಸುವರು. ತಾನು ಶಾಲೆಯಲ್ಲಿದ್ದಾಗ ಮನೆಯಲ್ಲಿ ಏನಾದರೂ ಅನಾಹುತವಾಗಬಹುದೆಂಬ ಕಾತರ, ಅಥವಾ ಮನೆಯ ವಾತಾವರಣದಿಂದ ದೂರವಿರಲು ಸಾಕಷ್ಟು ಭಾವ ಬೆಳವಣಿಗೆ ಇಲ್ಲದೆ ಇರುವುದು, ಅಥವಾ ಶಾಲೆ, ಉಪಾಧ್ಯಾಯರು, ಸಹಪಾಠಿಗಳು, ಪಾಠಪ್ರವಚನ ಮುಂತಾದ ವಿಷಯಗಳಲ್ಲಿ ಭಯ, ಅಥವಾ ತಾನು ಶಾಲೆಯಲ್ಲಿದ್ದಾಗ ಚಿಕ್ಕ ತಮ್ಮನೋ (ತಂಗಿಯೋ) ಹಿರಿಯರ ಪೂರ್ಣವಿಶ್ವಾಸಕ್ಕೆ ಪಾತ್ರನಾಗುತ್ತಾನೆಂಬ ಆತಂಕ-ಮೊದಲಾದುವು ಕಳವಳಕ್ಕೆ ಕಾರಣ. ಮತ್ತೆ ಕೆಲವು ಮಕ್ಕಳು ತಮ್ಮ ಇಚ್ಛೆಪೂರೈಸಿಕೊಳ್ಳಲು ಶಾಲೆಗೆ ತಪ್ಪಿಸಿಕೊಳ್ಳುವುದನ್ನು ಒಂದು ಸಾಧನವನ್ನಾಗಿ ಉಪಯೋಗಿಸುವರು. ಅಂದರೆ ಕೇಳಿದ ಸಾಮಾನುಗಳನ್ನು ಕೊಡಲಿಲ್ಲವಾದುದರಿಂದ ಶಾಲೆಗೆ ಹೋಗುವುದಿಲ್ಲವೆಂದು ಹಠ ಹಿಡಿಯುವರು. ಈ ಬಗೆಯ ಎಲಾ ಸಂದರ್ಭಗಳಲ್ಲಿ ತಾಯಿತಂದೆಗಳ ಮತ್ತು ಮಗುವಿನ ನಡುವೆ

ಇರುವ ಸಂಬಂಧವನ್ನು ಸರಿಪಡಿಸಬೇಕು. ಆವಶ್ಯಕತೆಗಳ ಕೊರತೆಯಿಂದಾಗಿ ಶಾಲೆಗೆ ಹೋಗಲು ಹಿಂಜರಿಯದಂತೆ ಬಟ್ಟೆಬರೆ, ಪುಸ್ತಕ, ಪೆನ್ಸಿಲ್ಲು, ಚೆಂಡು ದಾಂಡು ಮುಂತಾದುವನ್ನು ಸಾಧ್ಯವಾದಷ್ಟು ಮಟ್ಟಿಗೆ ಒದಗಿಸಿಕೊಡಬೇಕು ಶಾಲೆಯು ಮನೆಯಿಂದ ದೂರವಿದ್ದರೆ, ಪ್ರತಿದಿನ ಅಷ್ಟು ದೂರ ನಡೆಯಲು ಮಕ್ಕಳು ಬೇಸರಪಡುವರು. ಆದುದರಿಂದ ಆಯಾ ಹೊಹಲ್ಲಾದಲ್ಲಿ ಶಾಲೆಗಳನ್ನು ತೆಗೆಯುವುದು ಸರ್ಕಾರದ ಕರ್ತವ್ಯ.

ಮಕ್ಕಳು ಮನೆ ಬಿಟ್ಟು ಓಡಿಹೋಗುವುದು ಸಾಮಾನ್ಯ. ಆಗಿಂದಾಗ್ಯೆ ವೃತ್ತಪತ್ರಿಕೆಗಳಲ್ಲಿ "ಹುಡುಗ ತಪ್ಪಿಸಿಕೊಂಡಿದ್ದಾನೆ" ಎಂಬ ಪ್ರಕಟನೆ ಬರುತ್ತಿರುತ್ತದೆ. ಅಥವಾ ಮನೆಯವರೇ ಕಾಣದ, ಕೇಳದ ಸ್ಥಳದಲ್ಲಿರುವ ಹುಡುಗನಿಗೆ ಕೂಡಲೇ ವಾಪಸ್ಸಾಗುವಂತೆಯೋ, ಅಥವಾ ಅವನು ಹೋದಾಗಿನಿಂದ ತಾಯಿ ಅಥವಾ ಅಜ್ಜಿ ವ್ಯಸನಪಡುತ್ತಿದ್ದಾರೆಂದೋ, ವೃತ್ತಪತ್ರಿಕೆಗಳ ಮೂಲಕ ತಿಳಿಸುತ್ತಾರೆ. ಈ ಹುಡುಗರು ಬಂಧು ಬಳಗವದರಿಂದ ದೂರ ಹೋಗಲು ಕಾರಣವೇನೆಂದು ಕುತೂಹಲ ಕೆರಳುವುದು ಸಹಜ. ಸಾಮಾನ್ಯವಾಗಿ ಇವರು ಸ್ವಲ್ಪ ಕಾಲವಾದ ಮೇಲೆ ತಾವಾಗಿಯೇ ಹಿಂದಿರುಗುವರು.

ಅಲ್ಪಾವಧಿಯ ಪಲಾಯನಕ್ಕೆ ಕಾರಣವಾದ ಭಯ. ಕೋಪ, ಅಥವಾ ಸೇಡು ಕೆರಳಲು ಕಾರಣವೇನೆಂಬುದನ್ನು ತಿಳಿದು ತಕ್ಕ ಪ್ರತಿಕ್ರಿಯೆಯನ್ನು ಕೈಗೊಳ್ಳಬೇಕು. ತನ್ನ ನಡತೆಯ ವಿಷಯದಲ್ಲಿ ಅತೃಪ್ತಿಕರವಾದ ವರದಿಯನ್ನು ಮನೆಗೆ ತೆಗೆದುಕೊಂಡು ಹೋಗಬೇಕಾಗಿ ಬಂದಾಗ ಹುಡುಗನು ತನಗಾಗಲಿರುವ ಕಠಿಣ ಶಿಕ್ಷೆಯನ್ನು ನೆನೆಸಿಕೊಳ್ಳುವನು. ಹಿಂದೆ

ಅಂತಹ ಎಷ್ಟೋ ಸಂದರ್ಭಗಳಲ್ಲಿ ಅವನು ಅನುಭವಿಸಿದ ಕಠಿಣ ಶಿಕ್ಷೆ ಅವನ ಅರಿವಿಗೆ ಬರುವುದು. ಈ ಅಪ್ರಿಯಕರ ಅನುಭವ ದಿಂದ ಪಾರಾಗಲು ಹುಡುಗನು ಏನಾದರೂ ನೆಪ ಹುಡುಕಿ ಕೊಂಡ ನೆಂಟರಿಷ್ಟರ ಮನೆಗೆ ಓಡಿಹೋಗಲು ನಿಶ್ಚಯಿಸ ಬಹುದು. ಹಾಗೆ ನೆಂಟರಿಷ್ಟರು ಯಾರು ಇಲ್ಲದಿದ್ದಲ್ಲಿ ಮನೆ ಯಲ್ಲಿ ಕಾದಿರುವ ಶಿಕ್ಷೆಗಿಂತ ಕಾಣದ ಜಾಗ ಅಥವಾ ಯಾವ ಬಗೆಯ ತೊಂದರೆಯಾದರೂ ಉತ್ತಮವೆಂದು ಯೋಚಿಸಿ ಹುಡುಗನು ಮನೆಗೆ ಹೋಗದೆ ಇದ್ದು ಬಿಡಬಹುದು. ಎಂಥ ಅಪರಾಧವೇ ಆದರೂ ಹೀಗೆ ಮನೆಗೆ ಹೋಗಲು ಅಂಜಿ ಹುಡುಗನು ಪರಾರಿಯಾಗಬಹುದು.

ಕೆಲವು ವೇಳೆ ತಾಯಿತಂದೆಯರು ತನ್ನೊಡನೆ ನ್ಯಾಯ ಸಮ್ಮ ತವಲ್ಲದ ರೀತಿಯಲ್ಲಿ ವ್ಯವಹರಿಸಿದರೆಂದೋ, ಅಥವಾ ತಾನು ತಪ್ಪಿತಸ್ಥನಲ್ಲದಿದ್ದರೂ ಬಯ್ದು ಶಿಕ್ಷಿಸಿದರೆಂದೊ, ಹುಡುಗನು ಮನೆಯಿಂದ ಹೊರಟುಹೋಗಬಹುದು. ಅಥವಾ ಒಡಹುಟ್ಟಿ ದವರಿಗೆ ದೊರೆತ ವಿನಾಯಿತಿ ಅವನಿಗೆ ದೊರೆಯದೆ ಇದ್ದಿರ ಬಹುದು. ಆದುದರಿಂದ ಹುಡುಗನು ಕೋಪದಲ್ಲಿ, ಮನೆಯವರ ಮೇಲೆ ಸೇಡು ತೀರಿಸಿಕೊಳ್ಳುವ ಇಚ್ಛೆಯಿಂದ ಮನೆಗೆ ಹೋಗದೇ ಇದ್ದು ಬಿಡುವನು.

ಯಾವಾಗಲೂ ಒಡಹುಟ್ಟಿದವರೊಡನೆ ಹುಡುಗನನ್ನು ಹೋಲಿಸಿ ಅವನನ್ನು ಹೀಯಾಳಿಸುತ್ತಿದ್ದರೆ ಅವನು ಜುಗುಪ್ಸೆ ಗೊಂಡು ಮನೆಯಿಂದ ಹೊರಟು ಹೋಗಿಬಿಡಬಹುದು. ಹಾಗೆ ಮಾಡಿದಲ್ಲಿ ತಾನು ಇಲ್ಲದಿರುವಾಗ ಹಿರಿಯರು ತನ್ನ ಒಳ್ಳೆಯ ಗುಣಗಳನ್ನು ನೆನೆಸಿಕೊಳ್ಳುವರೆಂದೂ, ತನ್ನ ಯೋಗಕ್ಷೇಮದ ವಿಷಯದಲ್ಲಿ ತವಕಗೊಳ್ಳುವರೆಂದೂ, ಹುಡುಗನು ಬಗೆದು ಆ ಮೂಲಕ ತೃಪ್ತಿ ಹೊಂದುವನು.

ಮನೆಯಲ್ಲಿ ಯಾವಾಗಲೂ ಕದನಗಳಾಗುತ್ತಿದ್ದರೆ, ಅಥವಾ ಮಕ್ಕಳಿಗೆ ಮನೆಯಲ್ಲಿ "ರಕ್ಷಣೆ" "ಭರವಸೆ" ಸಿಗುವುದಿಲ್ಲವೆನಿಸಿ ದರೆ, ಸಹಜವಾಗಿ ಸ್ನೇಹ ಮತ್ತು ಭರವಸೆ ದೊರೆಯುವಲ್ಲಿಗೆ ಓಡಿ ಹೋಗುವುದುಂಟು. ಕೆಲವು ಹುಡುಗರು ಕೆಲಸ ಹುಡುಕಿ ಕೊಂಡು ಸ್ವತಂತ್ರವಾಗಿ ಬಾಳಬೇಕೆಂಬ ಉದ್ದೇಶದಿಂದ ಹೋಗು ತ್ತಾರೆ.

ಮತ್ತೆ ಕೆಲವು ಮಕ್ಕಳು ಸಾಹಸಕೃತ್ಯ, ಕೌತುಕ, ಮತ್ತು ಕೀರ್ತಿಯ ಮೋಹಕ್ಕೆ ಬಲಿಯಾಗಿ, ಕಥಾನಾಯಕ ಅಥವಾ ತಮ್ಮ ನೆಚ್ಚಿನ ಚಲನಚಿತ್ರ ನಟನನ್ನು ಅನುಕರಿಸಿ, ಎಲ್ಲವನ್ನೂ ತೊರೆದು ಹೋಗಿಬಿಡುತ್ತಾರೆ. ಕೆಲವು ವೇಳೆ ಶಾಲೆ, ಮನೆ ಗಳಲ್ಲಿಯ ಜೀವನದಲ್ಲಿ ಜುಗುಪ್ಸೆಯಾಗಿಯೋ ಅಥವಾ ಜವಾಬ್ದಾ ರಿಗೆ ಹೆದರಿಯೋ ಊರಿಂದ ಊರಿಗೆ ಹೋಗುವ ವಾಹನಗಳಲ್ಲಿ ಬಚ್ಚಿಟ್ಟುಕೊಂಡು ರಕ್ಷಣೆ ಪಡೆಯುತ್ತಾರೆ. ಅವರು ಇತರರ ಕಣ್ಣಿಗೆ ಬೀಳುವಷ್ಟರಲ್ಲಿ ಮನೆಯಿಂದ ದೂರ ಹೋಗಿಬಿಟ್ಟಿರು ತ್ತಾರೆ. ಕೆಲವು ಮಕ್ಕಳು ಸಹಪಾಠಿಯ ಸಲಹೆಗೆ ಸಮ್ಮತಿಸಿ ಅವನ ಜೊತೆಯಲ್ಲಿ ಓಡಿಹೋಗುವುದುಂಟು. ಕೆಲವು ಸಂದರ್ಭ ಗಳಲ್ಲಿ ಮನೆಯವರಿಗೆ ಹಣಸಹಾಯ ಮಾಡುವ ಉದ್ದೇಶದಿಂದ ಕೆಲಸ ಹುಡುಕಿಕೊಂಡು ಹೇಳದೆ ಹೊರಡುವುದೂ ಉಂಟು.

ಅನಾಥಾಲಯಗಳಿಂದ ಗುಟ್ಟಾಗಿ ತಮ್ಮ ತಾಯಿತಂದೆ ಗಳನ್ನು ಹುಡುಕಿಕೊಂಡು ಹೋಗುವ ಮಕ್ಕಳ ಸ್ಥಿತಿ ಕರುಣಾ ಜನಕವಾದುದು.

ಒಟ್ಟಿನಲ್ಲಿ, ಹಿರಿಯರಿಂದ ದೂರವಾಗಿ ಗುರುತಿಲ್ಲದ ಸ್ಥಳಗಳಿಗೆ ಮಕ್ಕಳು ಹೋದರೆಂದರೆ ಅನೇಕ ಬಗೆಯ ಕೆಡಕು ಸಂಭವಿಸ ಬಹುದು. ಎಲ್ಲ ಬಗೆಯ ಕಳ್ಳತನ, ದರೋಡೆ, ಅಪಘಾತ,

ಕೆಟ್ಟಜಾಡ್ಯ, ಮತ್ತು ಲೈಂಗಿಕ ದುರಭ್ಯಾಸಗಳಿಗೆ ತುತ್ತಾಗ ಬಹುದು. ಖೈದಿಗಳ ಹಿಂದಿನ ವೃತ್ತಾಂತಗಳನ್ನು ಪರಿಶೀಲಿಸಿ ದರೆ, ಅವರು ಚಿಕ್ಕ ವಯಸ್ಸಿನಲ್ಲಿ ಮನೆಬಿಟ್ಟು ಓಡಿಹೋಗಿ ಮೊದಲು ಕಳ್ಳತನ ಪ್ರಾರಂಭಿಸಿದುದು ಹೆಚ್ಚಾಗಿ ಕಂಡು ಬರು ವುದು.

ಮನೆಬಿಟ್ಟು ಓಡಿಹೋಗುವ ಗುಂಪಿಗೆ ಸೇರಿದ ಮಕ್ಕಳಿಗೆ ಮದ್ದು ಏನೆಂದರೆ, ತಾಯಿ ತಂದೆಗಳ, ಹಿರಿಯರ ಪ್ರೀತಿಯ ಬಂಧನ.

ಬೆಂಕಿ ಹಚ್ಚುವ ಹವ್ಯಾಸ ಮಕ್ಕಳಲ್ಲಿ ಬಹಳ ಅಪರೂಪ. ಈ ಪ್ರವೃತ್ತಿಯಲ್ಲಿ ತೊಡಗಿರುವ ಮಕ್ಕಳಲ್ಲಿ ಬಹುವಾಗಿ ಇತರ ಸಮಸ್ಯೆಗಳೂ ಕಾಣಬರುವುವು. ವ್ಯಾಸಂಗದೌರ್ಬಲ್ಯ ಸಾಂಘಿಕ ಜೀವನಕ್ಕೆ ಅಡಚಣೆಯೊಡ್ಡುವ ದೈಹಿಕ ಕುಂದು ಕೊರತೆಗಳು, ತೀವ್ರವ್ಯಾಕುಲ, ದುಃಸ್ವಪ್ನ, ಕನವರಿಕೆ, ಭೂತ ಪ್ರೇತಗಳ ಭಯ, ಲೈಂಗಿಕ ಸಮಸ್ಯೆ, ಹಾಸಿಗೆಯಲ್ಲಿ ಮೂತ್ರ ವಿಸರ್ಜನೆ—ಈ ಸಮಸ್ಯೆಗಳು ಪದೇ ಪದೇ ಕಂಡು ಬರುವುವು. ಕೆಲವು ಮಕ್ಕಳಲ್ಲಿ ಶಾಲೆಗೆ ತಪ್ಪಿಸಿಕೊಳ್ಳುವುದು, ಮನೆಬಿಟ್ಟು ಓಡಿ ಹೋಗುವುದು, ಕಳ್ಳತನ ಮತ್ತು ದುಷ್ಟ ತನ ಇವುಗಳು ವ್ಯಕ್ತವಾಗುತ್ತವೆ.

ತಾಯಿತಂದೆಗಳ ಮತ್ತು ಮಕ್ಕಳ ನಡುವೆ ಇರುವ ಸಂಬಂಧ ದಲ್ಲಿಯ ಕುಂದು, ತಾಯಿತಂದೆಗಳು ವಿಧಿಸುವ ಕಟ್ಟುಕಟ್ಟಳೆ, ತಾಯಿತಂದೆಗಳಲ್ಲಿ ಮಗುವಿಗಿರುವ ಅಸಂತುಷ್ಟಿ, ಒಡಹುಟ್ಟಿ ದವರಲ್ಲಿ ಸ್ಪರ್ಧೆ—ಈ ಕಾರಣಗಳು ಮಕ್ಕಳಲ್ಲಿ ಬೆಂಕಿ ಹಚ್ಚುವ ಪ್ರವೃತ್ತಿಯನ್ನು ಪ್ರಚೋದಿಸುವುವು. ಸಣ್ಣ ಹುಡುಗರು ಬೆಂಕಿ ಹೊತ್ತಿಸಿದಾಗ ತಾವು ಅನುಭವಿಸುವ ಒಂದು ಬಗೆಯ ಉದ್ರೇಕ

ಮತ್ತು ಕೋಲಾಹಲಕ್ಕಾಗಿ ಅಂಥ ಕೆಲಸಗಳಲ್ಲಿ ತೊಡಗು
ತ್ತಾರೆ. ಸಾಮಾನ್ಯವಾಗಿ ಧೈರ್ಯವಿಲ್ಲದವರು ಮತ್ತು ಧೈರ್ಯ
ಶಾಲಿಗಳು ಜೊತೆ ಜೊತೆಯಾಗಿ ಕೆಲಸ ಮಾಡುವುದುಂಟು.

ಮಕ್ಕಳು ಸಾಮಾನ್ಯವಾಗಿ ತಮ್ಮ ಮನೆಯಲ್ಲಿ ಅಥವಾ
ಮನೆಯ ಸುತ್ತಮುತ್ತಲಿನ ಪ್ರದೇಶದಲ್ಲಿ ಬೆಂಕಿಹೊತ್ತಿಸುವರು.
ತಾವು ದ್ವೇಷಿಸುವ ವ್ಯಕ್ತಿಯನ್ನೋ, ಅಥವಾ ಪರಿಸ್ಥಿತಿಯನ್ನೊ
ಸುಡುತ್ತಿರುವೆವೆಂಬ ಭ್ರಮೆಯಿಂದ ಬೆಂಕಿಯನ್ನು ಹಚ್ಚುತ್ತಾರೆ.
ಬೆಂಕಿಹೊತ್ತಿಕೊಂಡಾಗ ತಾವೇ ಮೊದಲು ಬೊಬ್ಬೆಯಿಟ್ಟು ಇತ
ರರ ಗಮನವನ್ನು ಆ ಕಡೆಗೆ ಎಳೆಯುತ್ತಾರೆ. ಆದುದರಿಂದ ಹೀಗೆ
ಬೆಂಕಿಯನ್ನು ಹಚ್ಚುವ ಹವ್ಯಾಸ ಮಕ್ಕಳ ಸುಪ್ತಚೇತನದಲ್ಲಿ
ಅಡಗಿರುವ ಚಿತ್ತವೃತ್ತಿಗಳ ಸಂಕೇತ ಅಥವಾ ಪ್ರತೀಕವೆನ್ನ
ಬಹುದು.

ಇದುವರೆವಿಗೂ, ಸುಳ್ಳು, ಕಳ್ಳತನ, ಹಿಂಸೆ, ಮನೆಯಿಂದ
ಓಡಿಹೋಗುವುದು, ಶಾಲೆಗೆ ತಪ್ಪಿಸಿಕೊಳ್ಳುವುದು ಮುಂತಾದ
ದುಃಶ್ಚಾಳಿಗಳು ಹೇಗೆ ನಿತ್ಯಜೀವನದ ಸನ್ನಿವೇಶಗಳಿಂದಾಗಿ
ಮಕ್ಕಳಲ್ಲಿ ಪ್ರಚೋದಿಸಲ್ಪಡುವುವು ಎಂಬುದನ್ನು ಕುರಿತು
ಪ್ರಸ್ತಾಪಿಸಿದ್ದಾಯಿತು. ಈ ಮಕ್ಕಳು ತಮ್ಮ ಎಳೆಯ ವಯಸ್ಸಿ
ನಲ್ಲಿ ಒಂದು ವೇಳೆ ದುಃಶ್ಚಾಳಿಗಳಿಗೆ ತುತ್ತಾದರೂ ಬುದ್ಧಿ ತಿಳಿದ
ಮೇಲೆ ಸಹಜವಾಗಿ ಗುಣವಂತರಾಗಬಹುದು.

ಆದರೆ ಇದೇ ದುಃಶ್ಚಾಳಿಗಳು ಮೇಲೆ ವಿಮರ್ಶಿಸಿರುವ ಸನ್ನಿ
ವೇಶಗಳಿಗೆ ಹೊರತಾದ, ಇತರ ಬಗೆಯ ವಿಚಿತ್ರ ಸನ್ನಿವೇಶ
ಗಳಿಂದಾಗಿ, ಮಕ್ಕಳಲ್ಲಿ ಕೆಟ್ಟ ನಡತೆ ಪ್ರಚೋದಿತವಾಗಬಹುದು.
ಈ ಗುಂಪಿಗೆ ಸೇರಿದ ಮಕ್ಕಳು ತಮ್ಮ ಎಳೆಯ ವಯಸ್ಸಿನಲ್ಲಿ ತಪ್ಪು
ದಾರಿ ಹಿಡಿದುದಲ್ಲದೆ ಮುಂದೆ ಕೂಡ ಅದೇ ದಾರಿಯನ್ನನುಸರಿ

ಸುವರು. ಸನ್ನಿವೇಶವನ್ನು ತಿದ್ದದ ಹೊರತು ಅಥವಾ ಮಕ್ಕಳನ್ನು ಆ ಸನ್ನಿವೇಶದಿಂದ ಬದಲಾಯಿಸದ ಹೊರತು ಬೇರೆ ಪರಿಹಾರ ವಿಲ್ಲ. ಈ ಮಕ್ಕಳ ದುಷ್ಕೃತ್ಯಗಳ ಹಿನ್ನಲೆಯ ಕಾರಣ ಸುಪ್ತ ಚೇತನದಲ್ಲಿ ಅಡಗಿಸಿಟ್ಟ ದ್ವೇಷಾಸೂಯೆ, ಕ್ರೋಧ, ಅಸಮಾಧಾನ, ಭಯ ಮತ್ತು ಅನಿಶ್ಚಯಗಳು. ಒಟ್ಟಿನಲ್ಲಿ, ಕಾರಣಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ಮೊದಲನೆಯದಾಗಿ ಮಕ್ಕಳ ವ್ಯಕ್ತಿತ್ವ-ದೇಹಾರೋಗ್ಯ ಮತ್ತು ದೈಹಿಕ ನ್ಯೂನ್ಯತೆಗಳು, ಬುದ್ಧಿಮಟ್ಟ, ಚಿತ್ತವೃತ್ತಿ ಮುಂತಾದುವು. ಎರಡನೆಯದಾಗಿ, ಮಕ್ಕಳು ಬೆಳೆಯುವ ಆವರಣ (ವೈಪರೀತ್ಯ ಆವರಣವನ್ನು ಮಾತ್ರ ತೆಗೆದುಕೊಡಲಾಗಿದೆ). ಆವರಣವನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ೧. ಮನೆಯ ಆವರಣ, ಅಂದರೆ ತಾಯಿ ತಂದೆಗಳ ಅನ್ಯೋನ್ಯ ಸಂಬಂಧ, ಹಿರಿಯರ ಪ್ರವೃತ್ತಿ, ಮತ್ತು ಕುಟುಂಬದಲ್ಲಿಯ ತಿಕ್ಕಾಟ. ೨. ಮನೆಯ ಹೊರಗಿನ ಆವರಣ—ಸಹಪಾಠಿಗಳು ಮತ್ತು ಸ್ನೇಹಿತರು, ನೆರೆಹೊರೆ, ಕೆಲವು ಬಗೆಯ ಸಾಹಿತ್ಯ ಮತ್ತು ಕಲೆಯ ಪ್ರಚೋದನೆ.

ಈ ಗುಂಪಿಗೆ ಸೇರಿದ ಮಕ್ಕಳ ವಿಚಾರವಾಗಿ ಪೂರ್ಣಜ್ಞಾನ ಪಡೆಯಬೇಕಾದರೆ, ಈ ಮಕ್ಕಳ ಸ್ಥಿತಿಗತಿಗಳನ್ನು ಕೂಲಂಕಷವಾಗಿ ಪರೀಕ್ಷಿಸಬೇಕಾಗುವುದು. ಅನೇಕ ಪರೀಕ್ಷಕರು ಶೋಧನೆಯನ್ನು ನಡೆಸಿದ್ದಾರೆ. ಅವರೆಲ್ಲರು ಹೆಚ್ಚುಕಡಮೆ ಒಂದೇ ಬಗೆಯ ಸ್ಥಿತಿಗತಿಗಳನ್ನು ಮನಗೊಂಡಿದ್ದಾರೆ.

## ಮಕ್ಕಳ ವ್ಯಕ್ತಿತ್ವ

ದೈಹಿಕ ಸ್ಥಿತಿ—ಗ್ಲುಯೆಕ್ ಎಂಬುವರು ೯೬೭ ದಾರಿತಪ್ಪಿದ ಮಕ್ಕಳನ್ನು ಪರಿಶೀಲಿಸಿದಾಗ ಅದರಲ್ಲಿ ಶೇ. ೫೬.೭ ರಷ್ಟು

ಮಂದಿ ದೇಹಾರೋಗ್ಯ ಪಡೆದಿದ್ದರು. ಶೇ. ೩೦.೨ ರಷ್ಟು ಮಂದಿ ಸಾಧಾರಣ ದೇಹಾರೋಗ್ಯ ಪಡೆದಿದ್ದರು ಮತ್ತು ಶೇ ೧೩.೧ ರಷ್ಟು ಮಂದಿ ಮಾತ್ರ ಅಸಮರ್ಪಕ ದೇಹಾರೋಗ್ಯ ವನ್ನು ಪಡೆದಿದ್ದರು. ಆ್ಯಂಡರ್ಸ್ ಲಿಯೋನಾರ್ಡ್ ಎಂಬುವರು ೧೦೦೦ ದಾರಿತಪ್ಪಿದ ಮಕ್ಕಳನ್ನು ಪರಿಶೀಲಿಸಿದಾಗ, ಶೇ. ೨೦.೩ ರಷ್ಟು ಮಂದಿಯ ದೇಹಾರೋಗ್ಯ ಸಮರ್ಪಕವಾಗಿಯೂ, ಶೇ. ೪೫.೪ ರಷ್ಟು ಮಂದಿಯದು ಸಾಧಾರಣವಾಗಿಯೂ, ಶೇ ೩೨.೭ ರಷ್ಟು ಮಂದಿಯದು ಅಸಮರ್ಪಕವಾಗಿಯೂ, ಮತ್ತು ಶೇ.೧.೫ ರಷ್ಟು ಮಂದಿಯದು ಶೋಚನೀಯವಾಗಿಯೂ ಇದ್ದಿತು. ಬರ್ತನ ಪರಿಶೀಲನೆಯಲ್ಲಿ ಶೇ. ೨೧.೩ ರಷ್ಟು ಮಂದಿಯಲ್ಲಿ ಅಸಮರ್ಪಕ ದೈಹಿಕ ಬೆಳವಣಿಗೆಯಿದ್ದಿತು ಮತ್ತು ಸಾಮಾನ್ಯ ಮಕ್ಕಳಲ್ಲಿ ಶೇ. ೫.೫ ರಷ್ಟು ಮಂದಿಯಲ್ಲಿ ಮಾತ್ರ ಅಸಮರ್ಪಕ ದೈಹಿಕ ಬೆಳವಣಿಗೆ ಕಂಡುಬಂದಿತು. ಆದರೆ ಹುವೆ ಮತ್ತು ಶೆಂಕ್ ಎಂಬುವರ ಪ್ರಕಾರ ೧೨೪,೫೨೬ ಮಂದಿ ಶಾಲಾ ಮಕ್ಕಳಲ್ಲಿ ಶೇ ೬೫.೬ ರಷ್ಟು ಮಂದಿಯಲ್ಲಿ ದೈಹಿಕ ಕುಂದು ಕೊರತೆಗಳಿದ್ದವು. ಮತ್ತೊಂದು ಪರಿಶೀಲನೆಯಲ್ಲಿ ಸುಮಾರು ಶೇ ೬೩ ರಷ್ಟು ಶಾಲಾ ಮಕ್ಕಳಲ್ಲಿ ದೈಹಿಕ ಕೊರತೆಗಳಿದ್ದವು.

ಆದರೆ ದಾರಿತಪ್ಪಿದ ಮಕ್ಕಳು ದೈಹಿಕ ಕುಂದು ಕೊರತೆಗಳಲ್ಲಿ ಇತರ ಮಕ್ಕಳಿಗೆ ಹೊರತಾಗಿರದಿದ್ದರೂ, ಅವರು ತಪ್ಪುದಾರಿ ಹಿಡಿಯಲು ಈ ಕುಂದು ಒಂದು ಕಾರಣವಾಗಿ ಪರಿಣಮಿಸ ಬಹುದು. ಹೇಗೆಂದರೆ, ಅನಾರೋಗ್ಯ ಮಗುವು ಶಾಲೆಗೆ ಹೋಗಲಾರದೆ ಶಾಲೆಗಳ್ಳನಾಗಬಹುದು.

ಬುದ್ಧಿಶಕ್ತಿ (I. Q )–ದಾರಿತಪ್ಪಿದ ಮಕ್ಕಳ ಬುದ್ಧಿಶಕ್ತಿಯ ವಿಚಾರವಾಗಿ ನಿರ್ದಿಷ್ಟವಾಗಿ ಹೀಗೇ ಎಂದು ಹೇಳಲು ಸಾಧ್ಯ

ವಿಲ್ಲ. ಅನೇಕ ಪರಿಶೀಲನೆಗಳ ಪ್ರಕಾರ ಈ ಮಕ್ಕಳು ಕಡಮೆ ಬುದ್ಧಿಶಕ್ತಿಯುಳ್ಳವರಾಗಿರುತ್ತಾರೆ. ಆದರೆ ಕಡಮೆ ಬುದ್ಧಿಶಕ್ತಿ ಇರುವ ಮಕ್ಕಳೆಲ್ಲರೂ ದಾರಿತಪ್ಪುವುದಿಲ್ಲ.

ಚಿತ್ತವೃತ್ತಿಯ (Temperamental) ಮತ್ತು ಭಾವಪರ (Emotional) ಅಂಶಗಳು:-ಸಾಮಾನ್ಯವಾಗಿ ಎಲ್ಲಾ ಪರಿಶೀಲನೆಗಳೂ ಈ ಮಕ್ಕಳಲ್ಲಿ ವೈಪರೀತ್ಯ ಮನೋವಿಶಿಷ್ಟತೆಯನ್ನು ಪ್ರಕಟಿಸಿವೆ. ಗ್ಲುಯೆಕ್ ಪರಿಶೀಲನೆಯನ್ನು ತೆಗೆದುಕೊಂಡರೆ, ೯೬೭ ಮಕ್ಕಳಲ್ಲಿ ೩೫೦ ಮಕ್ಕಳು ಪ್ರೇರಣೆಗೆ ತುತ್ತಾಗಿವೆಯೆಂದು, ತಿಳಿದುಬರುತ್ತದೆ. ಸೂಕ್ಷ್ಮಸ್ವಭಾವ, ಆವೇಗಪರತೆ ಮುಂತಾದ ಗುಣಗಳನ್ನು ವ್ಯಕ್ತಪಡಿಸಿದ್ದಾರೆ. ಶೇ ೭೫.೪ ರಷ್ಟು ಮಕ್ಕಳು ಉಗುರು ಕಚ್ಚುವುದು, ಬಿಕ್ಕುವುದು, ಹಾಸಿಗೆಯಲ್ಲಿ ಮೂತ್ರವಿಸರ್ಜನೆ, ಜೂಜುಕೋರತನ, ಧೂಮಪಾನ, ಕುಡಿತ ಮತ್ತು ಲೈಂಗಿಕ ದುಃಶ್ಚಾಳಿಗಳನ್ನು ಹೊಂದಿದ್ದರು. ೧೩೭ ಮಂದಿ ಚಲನ ಚಿತ್ರಗಳನ್ನು ಹೊಂದಿದ್ದರು. ಒರ್ಟನು ಈ ಮುಂದೆ ತಿಳಿಸಿರುವ ಅಂಕಿ ಅಂಶಗಳನ್ನು ಕೊಟ್ಟಿದ್ದಾನೆ:

| | ದಾರಿತಪ್ಪಿದ ಮಕ್ಕಳು. | ನಾರ್ಮಲ್ ಮಕ್ಕಳು. |
|---|---|---|
| ಅಸಾಮಾನ್ಯ ಸಹಜ ಪ್ರವೃತ್ತಿ (Abnormal instincts) | 59.4 | 12.0 |
| ಒಟ್ಟು ಭಾವಗಳ ಅಸ್ಥಿರತೆ (General emotional instability) | 48.2 | 11.7 |
| ಅಸಾಮಾನ್ಯ ಆಸಕ್ತಿ (Abnormal interests) | 45.7 | 13.2 |
| ಮಾನಸಿಕ ಗ್ರಂಥಿ ಮತ್ತು ಅಸ್ವಸ್ಥ ಭಾವನೆಯಿಂದ ಕೂಡಿದ ಇರವು (Complexes and morbid states) | 64.5 | 20.5 |

ಮಕ್ಕಳು ಬೆಳೆಯುವ ಆವರಣ :

ಮನೆಯಲ್ಲಿ ತಂದೆಯು ಕುಡುಕನಾಗಿದ್ದು ಅಥವಾ ತಾಯಿಯು ಅನೀತಿವಂತಳಾಗಿದ್ದರೆ, ಮಕ್ಕಳು ನೇರವಾಗಿ ತಾಯಿತಂದೆಗಳನ್ನು ಅನುಕರಣೆ ಮಾಡದಿದ್ದರೂ, ಹಿರಿಯರ ನಡವಳಿಕೆ ಒಂದಲ್ಲ ಒಂದು ರೀತಿಯಲ್ಲಿ ಮಕ್ಕಳ ಮೇಲೆ ಪ್ರಭಾವ ಬೀರುವುದು. ತಂದೆಯು ಕುಡಿಯುತ್ತಾನೆಂದು ಅಥವಾ ಕಳ್ಳತನ ಮಾಡುತ್ತಾನೆಂದು, ಇಲ್ಲವೆ ತಾಯಿಯ ನಡತೆ ಚೆನ್ನಾಗಿಲ್ಲ ವೆಂದು ಮಕ್ಕಳಿಗೆ ಗೊತ್ತಾದರೆ ಅವುಗಳ ಮನಸ್ಸನ್ನು ದುಷ್ಕೃತ್ಯ ಗಳ ಕಡೆಗೆ ಸೆಳೆಯಲು ಕಾರಣವಾಗುತ್ತದೆ. ತಾಯಿತಂದೆಗಳಲ್ಲಿ ಗೌರವ ಭಾವವಿಲ್ಲದಿದ್ದಲ್ಲಿ ಮಗು ತನ್ನನ್ನು ತಾನು ಗೌರವಿಸ ಲಾರದು ಮತ್ತು ತನ್ನ ಒಡನಾಡಿಗಳನ್ನಾಗಲೀ, ಅಲ್ಲದೆ ನೀತಿ ಮಾರ್ಗವನ್ನೇ ಆಗಲಿ ಗೌರವಿಸಲಾರದು. ಕುಡುಕರ ಸಂಸಾರ ಶೋಚನೀಯ. ಸಂಪಾದನೆಯನ್ನೆಲ್ಲಾ ಕುಡಿಯುವುದಕ್ಕೆ ಹಾಕುವರು. ಮನೆಯಲ್ಲಿ ಮಕ್ಕಳ ಆರೋಗ್ಯ ಮತ್ತು ಶಿಸ್ತನ್ನು ಅಲಕ್ಷ್ಯ ಮಾಡುವರು. ಈ ಕುಟುಂಬಕ್ಕೆ ಸಮಾಜ ದಲ್ಲಿ ಒಂದು ಗೌರವ ಸ್ಥಾನವಿರುವುದಿಲ್ಲ. ಕ್ರಮರಹಿತ ಬಾಳ್ವೆ, ತಾಯಿತಂದೆಗಳಲ್ಲಿ ತಿಕ್ಕಾಟ ಮತ್ತು ಘರ್ಷಣೆ ಆಗಾಗ್ಯೆ ತಲೆ ದೋರುವುದು. ಘರ್ಷಣೆ ಮಾತಿನಲ್ಲಾಗಬಹುದು ಅಥವಾ ಕಾರ್ಯ ತಹ ಆಗಬಹುದು. ಮನೆಯಲ್ಲಿಯ ಈ ಒಂದು ಸಹಿಸಲಸಾಧ್ಯ ವಾದ ಬಾಳಿನಿಂದ ಬಿಡುಗಡೆ ಹೊಂದುವ ಇಚ್ಛೆಯು ಮಕ್ಕಳಲ್ಲಿ ಆಗುವುದು ಸಹಜ. ತಾವು ಅನುಭವಿಸುವ ನೋವು, ಕಳವಳ, ಮತ್ತು ಜುಗುಪ್ಸೆಗೆ ಉಪಶಮನಪಡೆಯಲು ಮಕ್ಕಳು ದುರ್ನಡತೆಯ ದಾರಿಹಿಡಿಯಬಹುದು. ತಾನು ಸಹಿಸಿದ ಹಿಂಸೆ ಮತ್ತು ಕ್ರೌರ್ಯಕ್ಕೆ ಪ್ರತಿಯಾಗಿ ಮಗುವು ಮತ್ತೊಬ್ಬರೊ

ಡನೆಯೋ ಅಥವಾ ತನ್ನ ಕಿರಿಯರೊಡನೆಯೋ ದೌರ್ಜನ್ಯದಿಂದ ವರ್ತಿಸಬಹುದು. ತಾನು ತಿಂದ ಏಟು, ತಾನು ಕೇಳಿದ ಬಯ್ಗುಳಗಳನ್ನು ತನ್ನ ಕಿರಿಯರಿಗೆ ಹಿಂದಿರುಗಿಸಬಹುದು. ಅಥವ ಮನೆಯಿಂದ ಓಡಿಹೋಗಿ ಕಳ್ಳತನ ಮತ್ತಿತರ ಹವ್ಯಾಸಗಳಲ್ಲಿ ತೊಡಗುವುದರಿಂದ ಮನೆಯಲ್ಲಿ ಪಡೆಯಲಾಗದ ಉಲ್ಲಾಸವನ್ನು ಆ ಮೂಲಕ ಪಡೆಯಲೆತ್ನಿಸಬಹುದು.

ಮಕ್ಕಳು ವೈಯಕ್ತಿಕ ಸ್ವಭಾವದಿಂದಾಗಿ ಹೇಗೆ ತಪ್ಪುದಾರಿ ಹಿಡಿಯುತ್ತಾರೆಂಬುದು ಈ ಮುಂದೆ ಕೊಟ್ಟಿರುವ ನಿದರ್ಶನದಿಂದ ತಿಳಿಯಪಡುವುದು.

ಉದಾ. ೧. ಸ್ಯಾಲಿ ಎಂಬ ಹದಿನೇಳು ವರ್ಷದ ಹುಡುಗಿಯೊಬ್ಬಳು ಕಳ್ಳತನದಲ್ಲಿ ತೊಡಗಿದ್ದಳು. ಅವಳು ಚಿಕ್ಕವಳಾಗಿದ್ದಾಗ ಬಹಳಕಾಲ ಕಾಯಿಲೆಯಿಂದ ನರಳಿ ತಾಯಿಯ ಪ್ರೀತ್ಯಾದರಗಳಿಗೆ ಪಾತ್ರಳಾಗಿದ್ದಳು. ಪರಿಣಾಮವಾಗಿ, ಪರಿತಪಿಸುವ ಮುಂಗೋಪ ಮತ್ತು ನಿರ್ಬಂಧವಾಗಿ ಅಪೇಕ್ಷಿಸುವ ಮನೋಭಾವವನ್ನು ಬೆಳೆಯಿಸಿಕೊಂಡು ಬಂದಳು. ತನ್ನನ್ನು ಕಡೆಗಣಿಸುತ್ತಿದ್ದಾರೆಂದು ಬಗೆದಳು. ತನಗಿಂತ ತನ್ನ ತಂಗಿಯರು ಎಲ್ಲದರಲ್ಲೂ ನಿಪುಣೆಯರೆಂಬುದನ್ನು ತಿಳಿದಳು. ಮತ್ತು ಮನೆಯಲ್ಲಿ ತಾನೊಬ್ಬಳೇ ಕುರೂಪಿಯೆಂದು ಭಾವಿಸಿದಳು. ಇದೆಲ್ಲದರ ಪರಿಣಾಮವಾಗಿ ಕನಸಿನ ರಾಜ್ಯವನ್ನು ಕಟ್ಟಿ, ಅದನ್ನರಸಲೋಸುಗ ಮನೆಯಿಂದ ಓಡಿಹೋದಳು. ಸರ್ಕಾರದ ಗಮನಕ್ಕೆ ಬಂದಾಗ ಅವಳನ್ನು ಚಿಕಿತ್ಸೆಗಾಗಿ ಮನಶ್ಶಾಸ್ತ್ರಜ್ಞರೆಡೆಗೆ ಕಳುಹಿಸಿಕೊಟ್ಟರು. ಅಲ್ಲಿ ಅವಳ ಬುದ್ಧಿಮಟ್ಟ (Mental age) ೧೦ ವರ್ಷವೆಂದು ತಿಳಿದು ಬಂದಿತು. ಅದರ ಪ್ರಕಾರ ಆಕೆ ಅಡಿಗೆ ಕೆಲಸವನ್ನು ತೆಗೆದುಕೊಳ್ಳುವಂತೆ ಸಲಹೆ

ಯಿತ್ತರು. ಸ್ಯಾಲಿಗೆ ಇದು ಅಸಮ್ಮತ. ಏಕೆಂದರೆ ತನಗೆ ಬುದ್ಧಿ ತಿಳಿದಾಗಿನಿಂದ ತಾನು ತಾಯಿಗೆ ಅಡಿಗೆ ಕೆಲಸದಲ್ಲಿ ನೆರವಾಗುತ್ತಿದ್ದುದರ ಕಹಿ ನೆನಪು ಚೆನ್ನಾಗಿದ್ದಿತು. ಕೊನೆಯಲ್ಲಿ ತನ್ನ ನಿಸ್ಸಾರ ಜೀವನವನ್ನು ತುಂಬಿಸುವ ನೆಪದಿಂದ ತಾನು ಕೆಲಸಮಾಡುತ್ತಿದ್ದೆಡೆಯಲ್ಲಿ ದುಡ್ಡು ಅಪಹರಿಸತೊಡಗಿದಳು. ಸ್ವಲ್ಪ ಹಣವನ್ನು ತನಗಾಗಿ ಖರ್ಚುಮಾಡಿಕೊಂಡು ಮಿಕ್ಕ ಹಣವನ್ನು ಅದು ತನ್ನ ಕೆಲಸದ ಮೆಚ್ಚಿಗೆಗಾಗಿ ದೊರೆತ ಹೆಚ್ಚಿಗೆ ಸಂಬಳವೆಂದು ತಾಯಿಗೆ ಕೊಡತೊಡಗಿದಳು.

ಈ ಮುಂದೆ ತಿಳಿಸಿರುವ ನಿದರ್ಶನ ತಾಯಿತಂದೆಗಳ ಕೆಟ್ಟ ಗುಣ ಹೇಗೆ ಮಗುವಿನ ಮೇಲೆ ಪ್ರಭಾವ ಬೀರುವುದೆಂದು ತಿಳಿಯಪಡಿಸುವುದು.

ಉದಾ. ೨. ಚಿಕ್ಕ ಬಾಲಕನೊಬ್ಬನು ಬಲತಾಯಿಯ ಪ್ರೇರಣೆಯಿಂದಾಗಿ ಕದಿಯುವ ದುರಭ್ಯಾಸಕ್ಕೊಳಗಾದನು. ಹುಡುಗನು ವ್ಯರ್ಥವಾಗಿ ಮನೆಯಲ್ಲಿ ಕಾಲಹರಣ ಮಾಡುವುದರ ಬದಲು, ಸಾಮಾನು, ತರಕಾರಿ, ಮತ್ತು ತಿನಿಸುಗಳನ್ನು ಕದ್ದು ತನ್ನ ಊಟತಿಂಡಿಯ ಖರ್ಚನ್ನು ಒದಗಿಸಬೇಕೆಂದು ಬಲತಾಯಿಯ ಅಪ್ಪಣೆಯಾಯಿತು. ಮನೆಯ ಕಿರುಕುಳಕ್ಕಿಂತ ಇದು ಎಷ್ಟೋ ಉತ್ತಮವಾಗಿ ಹುಡುಗನಿಗೆ ತೋರಿತು ಈ ಕೆಲಸದಲ್ಲಿ ತೊಡಗಿರುವಾಗ ಬಾಲಕನು ಕೆಟ್ಟ ಸಹವಾಸಕ್ಕೆ ಬಲಿಯಾಗಿ ಬೀದಿಯಲ್ಲಿ ಬಿದ್ದಿರುತ್ತಿದ್ದ ಸಿಗರೇಟಿನ ತುಂಡುಗಳನ್ನು ಆರಿಸಿ ಸೇದತೊಡಗಿದನು. ಹಳೆಯ ಕಬ್ಬಿಣ ಮತ್ತು ಇತರ ಸಾಮಾನುಗಳನ್ನು ಕದ್ದು ಹಳೇ ಸಾಮಾನು ಕೊಳ್ಳುವವರಿಗೆ ಮಾರತೊಡಗಿದನು. ಸಾಮಾನಿನ ಬಂಡಿಯೊಳಕ್ಕೆ ಕಳ್ಳತನದಿಂದ ನುಸುಳಿ, ಪದಾರ್ಥಗಳನ್ನಪಹರಿಸಿ ಮನೆಗೆ

ಸಾಗಿಸತೊಡಗಿದನು. ಇಲ್ಲಿ ಮಲಸಹೋದರನ ನೆರವು ಸಹ ದೊರೆಯಲು ಮೊದಲಾಯಿತು. ಪ್ರತಿ ಶನಿವಾರ ಬೆಳಗಿನ ಜಾವ ಮನೆಬಿಟ್ಟು ಹೊರಟರೆಂದರೆ ಮಾರ್ಕೆಟ್ಟಿಗೆ ಹೋಗಿ ಬುಟ್ಟಿ ಬುಟ್ಟಿ ತರಕಾರಿಯನ್ನು ಲಪಟಾಯಿಸಿ ಮನೆಗೆ ತಪ್ಪದೆ ಸಾಗಿಸುತ್ತಿದ್ದರು. ಅಂಗಡಿಯವರ ಕಣ್ಣು ಹೇಗೆ ತಪ್ಪಿಸುವುದು, ಸಿಕ್ಕಿಕೊಳ್ಳುವ ಸಂದರ್ಭ ಬಂದರೆ ಹೇಗೆ ನುಣುಚಿಕೊಳ್ಳುವುದು, ಮುಂತಾದುದರಲ್ಲಿ ಈ ಬಾಲಕರು ಬಹಳ ಚತುರರಾದರು. ಈ ಚಟುವಟಿಕೆಗಳಿಗೆಲ್ಲ ಬಲತಾಯಿಯ ಬೆಂಬಲ ಮತ್ತು ಸಮ್ಮತಿ ಸದಾ ದೊರೆಯುತ್ತಿದ್ದಿತು. ನೆರೆಹೊರೆಯ ಬಾಲಕರಲ್ಲಿ ಈ ರೀತಿ ಹಿರಿಯರ ಪ್ರೇರಣೆಯಿಂದ ಕದಿಯದಿದ್ದವರೇ ಇರಲಿಲ್ಲ. ಹುಡುಗರೆಲ್ಲರೂ ಒಟ್ಟುಗೂಡಿದಾಗ ತಮ್ಮ ತಮ್ಮ ಚಟುವಟಿಕೆಗಳನ್ನು ಬಡಾಯಿ ಕೊಚ್ಚಿಕೊಳ್ಳುವುದು ವಾಡಿಕೆಯಾಗಿದ್ದಿತು.

ಈ ಕೆಳಗೆ ಕೊಟ್ಟಿರುವ ನಿದರ್ಶನದಿಂದ ನೆರೆಹೊರೆ ಮತ್ತು ಸ್ನೇಹಿತರು ಮಕ್ಕಳು ತಪ್ಪುದಾರಿ ಹಿಡಿಯುವುದಕ್ಕೆ ಹೇಗೆ ಕಾರಣರಾಗುತ್ತಾರೆಂಬುದು ವ್ಯಕ್ತವಾಗುವುದು.

ಉದಾ ೩. ಸುಮಾರು ಹನ್ನೊಂದು ಹನ್ನೆರಡು ವರ್ಷದ ಹುಡುಗನೊಬ್ಬನು ದುರ್ಜನರ ಸಹವಾಸಕ್ಕೆ ಬಿದ್ದನು ಅವನ ಸ್ನೇಹಿತರು ಸಣ್ಣ ಪುಟ್ಟ ಕಳ್ಳತನ ಮಾಡುತ್ತಿದ್ದರು. ಈ ಹುಡುಗನು ಅವರ ಮಾರ್ಗವನ್ನನುಸರಿಸತೊಡಗಿದನು. ಇವನು ವಾಸಿಸುತ್ತಿದ್ದ ಬಡಾವಣೆಯು ಕುಡುಕರು ಮತ್ತು ದುರ್ಜನರಿಂದ ತುಂಬಿದ್ದಿತು. ಯಾವಾಗಲೂ ಬೀದಿಯಲ್ಲಿ ಜಗಳ, ಹೊಡೆದಾಟಗಳು ನಡೆಯುತ್ತಲೇ ಇದ್ದುವು. ಅಕ್ಕಪಕ್ಕದ ಮನೆ, ಅಂಗಡಿಸಾಲು, ರಸ್ತೆ, ಎಲ್ಲಾ ಕಡೆಗಳಲ್ಲೂ ಕೊಳಕು ಮತ್ತು ಕಸ ತುಂಬಿದ್ದಿತು. ಈ ಹುಡುಗರು ಬೆಳಗ್ಗೆ ಮನೆಯ

ಬಾಗಿಲಿನಲ್ಲಿ ಹಾಲಿನವರು ಬ್ರೆಡ್ಡಿನವರು ಇರಿಸಿಹೋದ ಹಾಲು
ಬ್ರೆಡ್ಡುಗಳನ್ನು ಅಪಹರಿಸುತ್ತಿದ್ದರು. ತಾವು ಗೊತ್ತುಮಾಡಿ
ಕೊಂಡಿದ್ದ ಒಂದು ಹಳೆಯ ಮನೆಯಲ್ಲಿ ಒಟ್ಟು ಸೇರುತ್ತಿದ್ದರು.
ಆ ಮನೆಯ ಸಮೀಪದಲ್ಲಿಯೇ ಸ್ಮಿತ್ ಎಂಬಾತನೊಬ್ಬನಿದ್ದನು.
ಈ ಗುಂಪಿನ ಹುಡುಗರೆಲ್ಲರೂ ಕದ್ದ ಸಾಮಾನುಗಳನ್ನು ಸ್ಮಿತ್‌ಗೆ
ಕೊಟ್ಟು ಆತನಿಂದ ಹಣ ಪಡೆಯುತ್ತಿದ್ದರು. ಇದ್ದಿಲು ಗಾಡಿ
ಯವನು ತನ್ನ ಗಾಡಿಯನ್ನು ರಸ್ತೆಯಲ್ಲಿ ನಿಲ್ಲಿಸಿ, ಮನೆಗಳಿಗೆ
ಇದ್ದಿಲು ಮೂಟೆಯನ್ನು ತೆಗೆದುಕೊಂಡು ಹೋದಾಗ ಸಮಯ
ಕಾದಿದ್ದು ಈ ಗುಂಪು ಗಾಡಿಯನ್ನು ಓಡಿಸಿಕೊಂಡು ಹೋಗಿ
ಸ್ಮಿತ್‌ನಿಗೆ ಇದ್ದಿಲು ಕೊಟ್ಟು, ಗಾಡಿ ಕುದುರೆಯನ್ನು ದೂರ
ಎಲ್ಲಾದರೂ ಬಿಟ್ಟು ವಾಪಸ್ಸಾಗುತ್ತಿದ್ದರು. ಪ್ರತಿಫಲವಾಗಿ ಅವ
ನಿಂದ ದೊರೆಯುತ್ತಿದ್ದ ಹಣದಿಂದ ಹೋಟೆಲು ತಿಂಡಿ ಖರ್ಚು
ಮತ್ತು ಸಿನಿಮಾ ಖರ್ಚು ನಡೆಯುತ್ತಿದ್ದಿತು. ಕೆಲವು ವೇಳೆ
ಅವನು ಈ ಹುಡುಗರನ್ನು ಗಾಡಿಯಲ್ಲಿ ನೆರೆಹೊರೆಯ ಊರು
ಗಳಿಗೆ ಕರೆದುಕೊಂಡು ಹೋಗುತ್ತಿದ್ದನು. ಅಲ್ಲಿ ಇವರುಗಳು
ಸಮಯ ಕಾದಿದ್ದು ಸಾಮಾನುಗಳನ್ನು ಅಂಗಡಿಗಳಿಂದ ಕದ್ದು
ನಿಯಮಿತ ಸ್ಥಳದಲ್ಲಿ ಶೇಖರಿಸುತ್ತಿದ್ದರು. ಅಲ್ಲಿಂದ ಸ್ಮಿತ್ ತನ್ನ
ಗಾಡಿಯಲ್ಲಿ ಸಾಮಾನುಗಳನ್ನು ಸಾಗಿಸಿಕೊಂಡು ಬರುತ್ತಿದ್ದನು.
ಪ್ರತಿಫಲವಾಗಿ ಈ ಹುಡುಗರು ಸೇರಲು ಒಂದು ಹಳೆಯ ಮನೆ
ಯನ್ನು ಸ್ಮಿತ್ ಉಚಿತವಾಗಿ ಕೊಟ್ಟಿದ್ದನು. ಮತ್ತು ಆಗಾಗ್ಯೆ
ಕೊಂಚ ಹಣವನ್ನು ಸಹ ಕೊಡುತ್ತಿದ್ದನು.

ಗ್ಲುಯೆಕ್ ಪರಿಶೀಲನೆಯಲ್ಲಿ ಶೇ ೮೬.೭ ರಷ್ಟು ಮಂದಿ
ದಾರಿತಪ್ಪಿದ ಮಕ್ಕಳ ಸಂಬಂಧಿಗಳು ಖೈದಿಗಳಾಗಿದ್ದರು.
ಬರ್ಟ್ಟನ ಪರಿಶೀಲನೆಯಲ್ಲಿ ಶೇ. ೬೬ ರಷ್ಟು ಮಂದಿ ದಾರಿತಪ್ಪಿದ

ಮಕ್ಕಳ ಸಂಬಂಧಿಗಳು ಖೈದಿಗಳಾಗಿದ್ದರು. ಆದರೆ ಹೀ
ಎಂಬುವನ ಪರಿಶೀಲನೆಯಲ್ಲಿ ಶೇ. ೨೦ ರಷ್ಟು ಮಂದಿ ಮಾತ್ರ
ಖೈದಿಗಳಾದ ಸಂಬಂಧಿಕರನ್ನು ಹೊಂದಿದ್ದರು.

ದಾರಿತಪ್ಪಿದ ಮಕ್ಕಳ ವ್ಯಕ್ತಿತ್ವ, ತಾಯಿತಂದೆಗಳು, ಬೆಳ
ಯುವ ಆವರಣ, ಒಡನಾಡಿಗಳು, ನಾನಾ ಬಗೆಯ ಪ್ರಚೋ
ದನೆ. ಮುಂತಾದ ಅಂಶಗಳನ್ನು ದೃಷ್ಟಿಯಲ್ಲಿಟ್ಟುಕೊಂಡು
ಮಕ್ಕಳ ಬಾಳನ್ನು ವಿಮರ್ಶಿಸಿದ್ದಾಯಿತು. ಈಗ ನಮ್ಮ ಮುಂದೆ
ನಿಲ್ಲುವ ಪ್ರಶ್ನೆಯೆಂದರೆ ಈ ಮಕ್ಕಳಿಗೆ ಒದಗಿಸಬೇಕಾದ
ಪರಿಹಾರ. ಮನಶ್ಶಾಸ್ತ್ರಜ್ಞರ ನೆರವು ಅನಿವಾರ್ಯ ಮತ್ತು ಅತ್ಯಾ
ವಶ್ಯಕ. ಜೊತೆಗೆ ಸಮಾಜದ ಕರ್ತವ್ಯವೂ ಉಂಟು. ತಾಯಿ
ತಂದೆಗಳಲ್ಲಿ ಮಕ್ಕಳ ಪಾಲನೆಯ ವಿಷಯವಾಗಿ ಸೂಕ್ತ ತಿಳಿ
ವಳಿಕೆ ಕೊಡಬೇಕು. ಉಲ್ಲಾಸಕರವಾದ ಮತ್ತು ಹಿತವಾದ
ಆವರಣ ಮಕ್ಕಳು ಸನ್ಮಾರ್ಗದಲ್ಲಿ ನಡೆಯುವಂತೆ ಮಾಡು
ವುದು ಮತ್ತು ಮಕ್ಕಳಿಗೆ ತಮ್ಮ ಸುತ್ತಮುತ್ತಲಿನ ಆವರಣ
ದಿಂದ ಬಿಡುಗಡೆ ಹೊಂದಬೇಕೆಂಬ ಇಚ್ಛೆಯುಂಟಾಗುವುದಿಲ್ಲ.
ಬಡತನವು ಅನಿವಾರ್ಯವೆಂದೇನಿಲ್ಲ. ಬಡತನವನ್ನು ನಿವಾರಿ
ಸಿದರೆ ಆರ್ಥಿಕ ಮುಗ್ಗಟ್ಟಿನಿಂದಾಗಿ ಮಕ್ಕಳು ತಪ್ಪುದಾರಿ
ಹಿಡಿಯುವುದನ್ನು ತಪ್ಪಿಸಿದಂತಾಗುವುದು. ಶಾಲೆಯು ಮಕ್ಕಳ
ಬುದ್ಧಿಶಕ್ತಿ ಮತ್ತು ಆಸಕ್ತಿಗಳಿಗೆ ಒಳಪಟ್ಟುದಾಗಿರಬೇಕು.
ಅಥವಾ ಮಕ್ಕಳ ಬುದ್ಧಿಶಕ್ತಿ ಮತ್ತು ಆಸಕ್ತಿಗಳಿಗನುಗುಣವಾಗಿ
ಆಯಾ ಶಾಲೆಗಳಿಗೆ ಮಕ್ಕಳನ್ನು ಕಳುಹಿಸುವುದು ಸೂಕ್ತ.
ಇದರಿಂದಾಗಿ ಮಕ್ಕಳು ಶಾಲೆಗಳ್ಳರಾಗಲು ಕಾರಣವಿರುವುದಿಲ್ಲ.
ಸಾಹಿತ್ಯ ಮತ್ತು ಕಲೆ ಮಕ್ಕಳ ಬೆಳವಣಿಗೆಗೆ ಸಹಕಾರಿಯಾಗು
ವಂತಿರಬೇಕು.